# ಸಿದ್ಧಗಂಗಾ



ದಿನಾಂಕ 19-12-80ರ ಶುಕ್ರವಾರದಂದು ಶ್ರೀ ಕ್ಷೇತ್ರದಲ್ಲಿದ್ದ ವಿಜಯಾ ಬ್ಯಾಂಕಿನ ಎಕ್ಸ್‌ಟೆಂಷನ್ ಕೌಂಟರ್‌ನ್ನು ಪರಿವರ್ತಿತ ಶಾಖಾ ಬ್ಯಾಂಕನ್ನಾಗಿ ಶ್ರೀ ಶ್ರೀಗಳವರು ಉದ್ಘಾಟಿಸುತ್ತಿರುವುದು. ಚಿತ್ರದಲ್ಲಿ ವಿಜಯಾಬ್ಯಾಂಕಿನ ಜಾಯಿಂಟ್ ಜನರಲ್ ಮ್ಯಾನೇಜರ್ ಶ್ರೀ ಬಿ. ಬಿ. ಶೆಟ್ಟಿ ಮತ್ತು ರೀಜನಲ್ ಮ್ಯಾನೇಜರ್ ಶ್ರೀ ಕೆ. ಕೆ. ರೈ ರವನ್ನು ಹಾಗೂ ಶಾಖಾ ಮ್ಯಾನೇಜರ್ ಶ್ರೀ ಡಿ. ಎಸ್. ಶಂಕರ್ ರವರನ್ನೂ ಕಾಣಬಹುದು.

ಜನವರಿ **1981**

# "ಸಿದ್ಧಗಂಗಾಶ್ರೀ" ಸಂಭಾವನಾ ಗ್ರಂಥ
## ಸದವಕಾಶ

ಶ್ರೀಸಿದ್ಧಗಂಗಾ ಮಠಾಧ್ಯಕ್ಷರಾದ ಡಾ॥ ಶ್ರೀ ಶ್ರೀಗಳವರು 50ವರ್ಷಗಳಿಂದಲೂ ನಿರಂತರವಾಗಿ ಸಲ್ಲಿಸುತ್ತಿರುವ ಬಹುಮುಖವಾದ ಸಮಾಜ ಸೇವೆಯನ್ನು ಸ್ಮರಿಸಿ ನಾಡಿನ ಭಕ್ತರು ತಮ್ಮ ಕೃತಜ್ಞತೆಯನ್ನು ಸಮರ್ಪಿಸುವುದರ ಸಂಕೇತವಾಗಿ 1981ನೆಯ ಇಸ್ವಿಯಲ್ಲಿ "ಸುವರ್ಣ ಮಹೋತ್ಸವ"ವನ್ನು ಪೂಜ್ಯಸಾದರ ಘನತೆ ಗೌರವಗಳಿಗೆ ತಕ್ಕಂತೆ ಆಚರಿಸುವ ಸಂಕಲ್ಪ ಮಾಡಿದೆ. ಆ ಸಂದರ್ಭದಲ್ಲಿ ಶ್ರೀ ಶ್ರೀಗಳವರಿಗೆ "ಸಿದ್ಧಗಂಗಾ ಶ್ರೀ" ಎಂಬ ರಾಷ್ಟ್ರಮಟ್ಟದ ಸಂಭಾವನಾ ಸಂಪುಟವನ್ನು ಸಮರ್ಪಿಸಬೇಕೆಂದು ಉದ್ದೇಶಿಸಿದೆ. ಆ ಗ್ರಂಥ ಕಾರ್ಯ ಮುಗಿಯುತ್ತಾ ಬಂದಿದೆ. ಆಕಾರ $\frac{1}{4}$ ಡೆಮ್ಮಿ 1200 ಪುಟಗಳ ಬೃಹದ್ ಗ್ರಂಥವಾಗಿದೆ. ಈ ಗ್ರಂಥಕ್ಕೆ ಬಿಡುಗಡೆಯ ಕಾಲಕ್ಕೆ 150 ರೂಪಾಯಿಗಳ ಬೆಲೆಯನ್ನು ಪ್ರತಿಯೊಂದಕ್ಕೆ ಗೊತ್ತುಪಡಿಸಲಾಗಿದೆ. ಮುಂಗಡವಾಗಿ ಪ್ರತಿಯನ್ನು ಕಾದಿರಿಸಿಕೊಳ್ಳುವ ಭಕ್ತರಿಗೆ 101 ರೂಪಾಯಿಗಳನ್ನು ಹಳೆಯ ವಿದ್ಯಾರ್ಥಿಗಳಿಗೆ 75/ ರೂಗಳನ್ನು ನಿಗದಿಪಡಿಸಲಾಗಿದೆ. ಈ ಬಗ್ಗೆ ಮುಂಗಡವಾಗಿ ಕಾದಿರಿಸುವ ಇಚ್ಛೆಯುಳ್ಳವರು ಹಳೆಯ ವಿದ್ಯಾರ್ಥಿ ಸಂಘದ ಕಾರ್ಯದರ್ಶಿಯವರೊಡನೆ ವ್ಯವಹರಿಸಬೇಕಾಗಿ ಪ್ರಾರ್ಥನೆ.

---

## ಹಳೆಯ ವಿದ್ಯಾರ್ಥಿಗಳ ಸಂಘ
### ಶ್ರೀ ಸಿದ್ಧಗಂಗಾ ಗುರುಕುಲ : : ತುಮಕೂರು ಜಿಲ್ಲಾ
### **ಸರ್ವಸದಸ್ಯರ ಮಹಾಧಿವೇಶನದ ಆಹ್ವಾನ ಪತ್ರಿಕೆ**

**ಪ್ರಿಯ ಮಿತ್ರರೇ,**

ನಮ್ಮ ಸಂಘದ ಇಪ್ಪತ್ತಾರನೆಯ **ಸರ್ವಸದಸ್ಯರ** ಮಹಾಧಿವೇಶನವನ್ನು ದಿನಾಂಕ **11-1-1981** ನೆಯ ಭಾನುವಾರ ಬೆಳಗಿನ **10-30** ಘಂಟೆಗೆ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಸಮಾವೇಶಗೊಳ್ಳುವಂತೆ ಶ್ರೀ ಶ್ರೀಗಳವರ ಅಪ್ಪಣೆಯ ಮೇರೆಗೆ ತೀರ್ಮಾನಿಸಲಾಗಿದೆ. ಅನೇಕ ಅಮೂಲ್ಯ ವಿಚಾರಗಳನ್ನು ಚರ್ಚಿಸುವ ಸಲುವಾಗಿ ತಾವೆಲ್ಲರೂ ಅಂದು ಗೆಳೆಯರೊಡನೆ ತಪ್ಪದೆ ಆಗಮಿಸಿ ತಮ್ಮ ಅಮೂಲ್ಯ ಸಲಹೆ ಸಹಕಾರಗಳನ್ನಿತ್ತು ಅಧಿವೇಶನವನ್ನು ಯಶಸ್ವಿಗೊಳಿಸಬೇಕಾಗಿ ಕೋರುತ್ತೇವೆ. ಅನೇಕ ಮಿತ್ರರ ವಿಳಾಸಗಳು ಬದಲಾವಣೆಯಾಗಿರುವ ಕಾರಣ ಪತ್ರಗಳು ತಲುಪದಿರಬಹುದು, ಪತ್ರಗಳು ತಲುಪಿದ ಸದಸ್ಯರು ತಮಗೆ ತಿಳಿದಿರುವ ಹಳೆಯ ವಿದ್ಯಾರ್ಥಿಮಿತ್ರರನ್ನು ಕರೆತರುವ ಕೃಪೆ ಮಾಡಬೇಕಾಗಿ ವಿನಂತಿ.

ತಮ್ಮ ವಿಶ್ವಾಸಿ,
ಎಂ. ಎನ್. ಚನ್ನಬಸಪ್ಪ
ಪ್ರಧಾನ ಕಾರ್ಯದರ್ಶಿ

ಶ್ರೀ ಸಿದ್ಧಗಂಗಾ ಕ್ಷೇತ್ರ
ತಾ॥ 16-12-80

# ಸಿದ್ಧಗಂಗಾ

ಸಂಪುಟ - ೦೭ ಸಂಚಿಕೆ - ೧ ಜನವರಿ, ೧೯೮೧

* * *

ಭವಾಂಬೋಧಿನಾವಂ ಸದಾಶುದ್ಧಭಾವಂ
ಶಿವಂ ಶಾಂತನೋಕಂ ಪರಿತ್ರಾತಲೋಕಂ ।
ಶಿವಾನಂದಲಿಂಗಂ ಶಿವಾದ್ವೈತಲಿಂಗಂ
ಪರಬ್ರಹ್ಮ ಲಿಂಗಂ ಭಜೇಸಿದ್ಧಲಿಂಗಂ ॥

* * *

ಮನ ಮನ ಬೆರಸಿದಲ್ಲಿ ತನು ಕರಗದಿದ್ದರೆ,
ಸೋಂಕಿನಲ್ಲಿ ಪುಳಕಂಗಳು ಹೊರಹೊಮ್ಮದಿದ್ದರೆ,
ಕಂಡಾಗಳಶ್ರುಜಲಂಗಳು ಸುರಿಯದಿದ್ದರೆ,
ನುಡಿವಲ್ಲಿ ಗದ್ಗದಂಗಳು ಹೊರಹೊಮ್ಮದಿದ್ದರೆ,
ಕೂಡಲ ಸಂಗಮ ದೇವರ ಭಕ್ತಿಗಿದು ಚಿಹ್ನೆ,
ಎನ್ನಲ್ಲಿವಿಲ್ಲವಾಗಿ; ಆನು ಡಂಭಕ ಕಾಣಿರೇ.

**— ಬಸವಣ್ಣ**

# ಈ ಸಂಚಿಕೆಯಲ್ಲಿ



## ಚಂದಾದಾರರಲ್ಲಿ ವಿನಂತಿ

1981 ನೆಯ ವರ್ಷದ ಚಂದಾ ನಂಬರ್ ಗುರುತಿಸಿಕೊಳ್ಳಿ. ವಿಳಾಸ ಬದಲಾವಣೆ ಮುಂತಾದ ವಿಚಾರಗಳಲ್ಲಿ ನಮ್ಮೊಡನೆ ವ್ಯವಹರಿಸುವಾಗ, ತಮ್ಮ ಚಂದಾ ನಂಬರ್ ಮತ್ತು ನಮ್ಮ ಪ್ರತಿನಿಧಿಗಳ ಹೆಸರನ್ನು ಬರೆಯುವುದನ್ನು ಮರೆಯಬೇಡಿ. ಚಂದಾ ಬಾಕಿಇರುವವರು ಸಂದಾಯಮಾಡಿ, ಸದಸ್ಯತ್ವವನ್ನು ಮುಂದುವರಿಸಿಕೊಂಡು 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿರಿ. ಸಿದ್ಧಗಂಗಾ ತರಿಸಿಕೊಳ್ಳುವಂತೆ ತಮ್ಮ ಬಂಧು ಮಿತ್ರರು ಮತ್ತು ಹಿತೈಷಿಗಳನ್ನು ಪ್ರೋತ್ಸಾಹಿಸಿ.



# ಶ್ರೀವಾಣಿ

ಇದು ಸಮಸ್ಯೆಯ ಯುಗ, ಬಲ್ಲವರ ಮಾತು. ಇಂದು ಅನೇಕ ಸಮಸ್ಯೆಗಳು ಹುಟ್ಟುತ್ತಿವೆ. ಬೆಳೆಯುತ್ತಿವೆ. ಅವು ದೊಡ್ಡ ಸಮಸ್ಯೆಗಳಾಗಿರಬಹುದು, ಸಣ್ಣ ಸಮಸ್ಯೆಗಳಾಗಿರಬಹುದು. ಇವುಗಳ ಹರವು ವ್ಯಕ್ತಿಯಿಂದ ಹಿಡಿದು ರಾಷ್ಟ್ರದವರೆಗಿದೆ. ಮತ್ತು ಅವು ಬಹುಮುಖವಾಗಿವೆ. ಆರ್ಥಿಕ ಸಮಸ್ಯೆ, ಆಧ್ಯಾತ್ಮಿಕ ಸಮಸ್ಯೆ, ಶೈಕ್ಷಣಿಕ ಸಮಸ್ಯೆ, ಸಾಮಾಜಿಕ ಸಮಸ್ಯೆ ಇತ್ಯಾದಿಯಾಗಿ. ಬಡತನ, ನಿರಶನ, ಅವಸನ, ಅವಿದ್ಯೆ ಮುಂತಾದುವು ವೈಯಕ್ತಿಕ ಸಮಸ್ಯೆಗಳು. ಅಥವಾ ಕೌಟುಂಬಿಕ ಸಮಸ್ಯೆಗಳು. ಸಂಘಟನೆಯಿಲ್ಲದಿರುವುದು, ಪರಸ್ಪರ ದ್ವೇಷಾಸೂಯೆ, ಅನೈಕಮತ್ಯ, ಕಚ್ಚಾಟಾದಿಗಳು ಸಾಮಾಜಿಕ ಸಮಸ್ಯೆಗಳು. ಇನ್ನು ರಾಷ್ಟ್ರದ ಮಟ್ಟಕ್ಕೆ ಹೋದರೆ, ಪಕ್ಷಾಂತರ, ಅಧಿಕಾರದಾಹ ಮುಂತಾದ ಭಯಂಕರ ಸಮಸ್ಯೆಗಳು ಕಂಡುಬರುತ್ತವೆ. ಉಳಿದೆಲ್ಲ ಸಮಸ್ಯೆಗಳಿಗೂ ಇದೇ ಮಾತು ಅನ್ವಯವಾಗುತ್ತದೆ. ಇಂಥ ಈ ಸಮಸ್ಯೆಗಳನ್ನು ಪರಿಹರಿಸಲು ಸರ್ಕಾರ ಹಲವು ಹನ್ನೊಂದು ಯೋಜನೆಗಳನ್ನು ರೂಪಿಸಿದೆ ನಿಜ. ಆದರೆ ಎಲ್ಲಿಯವರೆಗೆ ವ್ಯಕ್ತಿ ತಾನು ಸಮಸ್ಯೆಗಳನ್ನು ಚೆನ್ನಾಗಿ ಅರ್ಥಮಾಡಿಕೊಂಡು ಅವುಗಳ ಪರಿಹಾರೋಪಾಯವನ್ನು ಕಂಡುಕೊಂಡು, ಮತ್ತೆ ಅವು ಬಂದು ಮುತ್ತದಂತೆ ಜಾಗೃತನಾಗಿರುವುದಿಲ್ಲವೋ ಅಲ್ಲಿಯವರೆಗೆ ಸರ್ಕಾರದ ಎಲ್ಲ ಯೋಜನೆಗಳೂ ವ್ಯರ್ಥ. ಆದುದರಿಂದ ವ್ಯಕ್ತಿ, ಸಮಸ್ಯೆಗಳನ್ನು ಸ್ವಯಂ ಪರಿಹರಿಸಿಕೊಳ್ಳುವ ಯತ್ನಮಾಡಬೇಕು. ಅದರಲ್ಲಿಯೇ ಅವನ ಬದುಕಿನ ಸಾಫಲ್ಯವಡಗಿದೆ. ತನ್ಮೂಲಕ ಸಮಾಜ, ದೇಶ, ರಾಷ್ಟ್ರ ಎಲ್ಲವೂ ಸಫಲತೆಯನ್ನು ಕಾಣಬೇಕಾಗಿದೆ.

"ಸಿದ್ಧಗಂಗಾ" ಮಾಸ ಪತ್ರಿಕೆ

ಪ್ರಕಾಶಕರು

ಹೆಚ್. ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

## ಸಂಪಾದಕ ಮಂಡಲಿ

ಪಂ॥ ಚನ್ನಪ್ಪ ಎರೇಸೀಮೆ

ಪಿ. ಎನ್. ಚಂದ್ರಶೇಖರಯ್ಯ

ಬಸವರಾಜು

ಜಾಹಿರಾತು ಕಾರ್ಯದರ್ಶಿ

ಎಂ. ರೇಣುಕಾರಾಧ್ಯ

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

## ಚಂದಾ ವಿವರ

ಅಜೀವ ಸದಸ್ಯತ್ವ 151-00 ರೂ

ವಾರ್ಷಿಕ ಚಂದಾ 12-00 ರೂ

ಪ್ರಕಾಶಕರು

'ಸಿದ್ಧಗಂಗಾ' ಮಾಸಪತ್ರಿಕೆ

ಶ್ರೀ ಸಿದ್ಧಗಂಗಾ ಮಠ—572104

ತುಮಕೂರು ಜಿಲ್ಲೆ.

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ, ವೈಚಾರಿಕ, ಚಿಂತನ ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೇ ಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರೆಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

# ಸಂಪಾದಕೀಯ

ಶ್ರೀ ಸಿದ್ಧಗಂಗಾ ಕ್ಷೇತ್ರವು ಸುಪ್ರಸಿದ್ಧ ಧಾರ್ಮಿಕ ಸಂಸ್ಥೆ, ಐತಿಹಾಸಿಕ ಯಾತ್ರಾಸ್ಥಳ. ಸಾಧಕರ ಸಿದ್ಧಿ ಕ್ಷೇತ್ರ. ಹಲವು ಸಂತರು ತಪಗೈದ ತಪೋಭೂಮಿ. ಭಕ್ತ ಭಾವುಕರ ಪ್ರಸಾದ ನಿಲಯ, ಮಿಗಿಲಾಗಿ ಬೃಹತ್ ವಿದ್ಯಾ ಕೇಂದ್ರ. ಶ್ರೀ ಮಠವು ಸಹಸ್ರಾರು ಬಡ ಮಕ್ಕಳ ಏಳಿಗೆಗೆ ಸದಾ ಶ್ರಮಿಸುತ್ತಿದೆ. ಇಲ್ಲಿಯ ಪ್ರಸಾದ ವನ್ನುಂಡ ಸಹಸ್ರಾರು ಚೈತನ್ಯಗಳು ಬೆಳಕು ಕಂಡಿವೆ. ಶ್ರೀ ಮಠದ ಗುರು ಪರಂ ಪರೆಯ ತಪಸ್ಸಿನ ಶ್ರೀ ರಕ್ಷೆ ಇದಕ್ಕೆ ಪ್ರೇರಕವಾಗಿದೆ. ಮತ್ತು ಮಹಾ ದಾಸೋಹ ಮೂರ್ತಿ ಪರಮ ಪೂಜ್ಯ ಶ್ರೀ ಶ್ರೀಗಳವರ ಕಾಯಕ ತಪಸ್ಸಿನ ಪುಣ್ಯ ಫಲದಿಂದ ಶ್ರೀ ಕ್ಷೇತ್ರ ಬೆಳೆದು ನಿಂತಿದೆ.

ಶ್ರೀ ಶ್ರೀಗಳವರ ಜ್ಞಾನ ಪ್ರಸಾರ ಕಾರ್ಯಕ್ಕೆ ಇತಿಮಿತಿ ಇಲ್ಲ. ನಾಡಿನಾ ದ್ಯಂತ ಸ್ಥಾಪಿಸಿರುವ ವಿದ್ಯಾಸಂಸ್ಥೆಗಳು ಈ ಪ್ರಸಾರ ಕಾರ್ಯದ ಸಂಕೇತ. "ಜನತೆ ಸುಸಂಸ್ಕೃತವಾದ ನೈತಿಕ ನೆಲೆಗಟ್ಟಿನ ಜೀವನ ಸಾಗಿಸಬೇಕು. ಧರ್ಮದ ಬಾಳು ರಾಷ್ಟ್ರೋನ್ನತಿಗೆ ಸಾಧಕ. ಇದರಿಂದ ಸುಖ, ಶಾಂತಿ, ಸಮೃದ್ಧಿ" ಇದು ಶ್ರೀ ಶ್ರೀಗಳವರ ಸಂದೇಶ. ಈ ಘನ ಉದ್ದೇಶದಿಂದ ಶ್ರೀ ಶ್ರೀಗಳವರ ಅನುಗ್ರಹ ಆಶೀರ್ವಾದ ಪಡೆದು 1965 ರ ಜನವರಿ 14 ರ ಸಂಕ್ರಮಣದಂದು 'ಸಿದ್ಧಗಂಗಾ' ತ್ರೈಮಾಸಿಕವಾಗಿ ಜನ್ಮತಳೆಯಿತು. ಆ ಹತ್ತು ವರ್ಷಗಳ ನಂತರ 1975 ರ ಜನವರಿ 14 ರ ಸಂಕ್ರಮಣದಂದು ಮಾಸಿಕವಾಗಿ ನಾಡಿನ ತುಂಬಾ ಸಂಚರಿಸಿ, ಇದೇ 1981 ನೇ ಜನವರಿ ಸಂಕ್ರಮಣದಂದು ಡೆಮ್ಮಿ 1/8 ರ ಆಕಾರದಲ್ಲಿ ಹೆಚ್ಚು ಪುಟಗಳ ಮಾಸಿಕ ಪತ್ರಿಕೆಯಾಗಿ 17 ನೆಯ ವರ್ಷದಲ್ಲಿ ಪದಾರ್ಪಣ ಮಾಡುತ್ತಾ ನಮ್ಮ ಎಲ್ಲ ಅಭಿ ಮಾನಿಗಳ ಕೈ ಸೇರುತ್ತಿದೆ. ಇದು ಅತ್ಯಂತ ಹೆಮ್ಮೆಯ ವಿಷಯ. ಇದುವರೆಗೆ ನಾಡಿನ ಜ್ಞಾನ ಪ್ರಸಾರ ಕಾರ್ಯದಲ್ಲಿ ಉತ್ತಮ ಬರಹಗಾರರು ಲೇಖನ ಕಳುಹಿಸಿ ಉಪಕರಿ ಸಿದ್ದಾರೆ. ಸಹೃದಯಿಗಳು 'ಸಿದ್ಧಗಂಗಾ'ದ ಮೂಲಕ ಆನಂದಿಸಿದ್ದಾರೆ. ಈ ಕಾರ್ಯ ದಲ್ಲಿ ನಮ್ಮ ಪ್ರತಿನಿಧಿಗಳು ಅತ್ಯಂತ ಉತ್ಸಾಹದಿಂದ ಕಾರ್ಯ ನಿರ್ವಹಿಸಿದ್ದಾರೆ. ಜಾಹಿರಾತುದಾರರು ಪತ್ರಿಕೆಯ ಬೆಳವಣಿಗೆಗೆ ಪ್ರೋತ್ಸಾಹ ನೀಡಿದ್ದಾರೆ. ಈ ದಿಸೆಯಲ್ಲಿ ಸಹಕರಿಸಿದ ಎಲ್ಲ ಅಭಿಮಾನಿಗಳಿಗೂ 'ಸಿದ್ಧಗಂಗಾ' ಅಭಿನಂದನೆಯನ್ನು ಸಲ್ಲಿಸುತ್ತದೆ. ಇದೇ ರೀತಿ ಮುಂಬರುವ ದಿನಗಳಲ್ಲಿ ಯಶಸ್ಸುಗಳಿಸಲು ಸಹೃದಯರ ಮತ್ತು ಮಹಾ ಜನರ ಬೆಂಬಲ, ಪರಮಾತ್ಮನ ಅನುಗ್ರಹ ಮತ್ತು ಶ್ರೀ ಶ್ರೀಗಳವರ ಆಶೀರ್ವಾದವನ್ನು ಪತ್ರಿಕೆಯು ಪ್ರಾರ್ಥಿಸುತ್ತದೆ.

# ನವನೀತ

**ಈಶಃ ಕರಸ್ಥೀಕೃತಕಾಂಚನಾದ್ರಿಃ**
**ಕುಬೇರಮಿತ್ರಂ ರಜತಾಚಲಸ್ಥಃ ।**
**ತಥಾಪಿ ಭಿಕ್ಷಾಟನಮಸ್ಯ ಜಾತಂ**
**ವಿಧೌ ಶಿವಃಸ್ಥೇ ಕುಟಿಲೇ ಕುತಃ ಶ್ರೀಃ ॥**

—ವಿಶ್ವಗುಣಾದರ್ಶ

ಈಶ್ವರನ ಕೈಯಲ್ಲಿರುವುದು ಚಿನ್ನದ ಬೆಟ್ಟ ; ಕುಬೇರನು ಮಿತ್ರನಾಗಿದ್ದಾನೆ; ವಾಸವೋ ರಜತಾಚಲದಲ್ಲಿ ; ಇಷ್ಟಿದ್ದರೂ ಶಿವನು ಭಿಕ್ಷೆ ಬೇಡಬೇಕಾಯಿತು ! ಹಣೆ ಬರೆಹ ಚನ್ನಾಗಿಲ್ಲದಿದ್ದರೆ ಐಶ್ವರ್ಯವೆಲ್ಲಿಂದ ಬಂದೀತು ?

‡‡ ‡‡ ‡‡

**ಸುಹೃದಿ ನಿರಂತರಚಿತ್ತೇ ಗುಣಾವತಿ ಭೃತ್ಯೇಽನುವರ್ತಿನಿ ಕಲತ್ರೇ ।**
**ಸ್ವಾಮಿನಿ ಸೌಹೃದಯುಕ್ತೇ ನಿವೇದ್ಯ ದುಃಖಂ ಸುಖೀಭವತಿ ॥**

—ಪಂಚತಂತ್ರ

ಒಂದೇ ರೀತಿಯ ಮನಸ್ಸುಳ್ಳ ಸ್ನೇಹಿತನಲ್ಲಿ, ಗುಣಶಾಲಿಯಾದ ಸೇವಕನಲ್ಲಿ, ತನ್ನನ್ನು ಅನುಸರಿಸುವ ಪತ್ನಿಯಲ್ಲಿ, ಒಳ್ಳೆಯ ಮನಸ್ಸುಳ್ಳ ಒಡೆಯನಲ್ಲಿ ತನ್ನ ದುಃಖವನ್ನು ತೋಡಿಕೊಂಡು ಮನುಷ್ಯನು ಸುಖಿಯಾಗಿರುತ್ತಾನೆ.

‡‡ ‡‡ ‡‡

**ಪ್ರಭೂತವಯಸಃ ಪುಂಸೋ ಧಿಯಃ ಪಾಕಃ ಪ್ರವರ್ತತೇ ।**
**ಜೀರ್ಣಸ್ಯ ಚಂದನತರೋರಾಮೋದ ಉಪಜಾಯತೇ ॥**

—ದೃಷ್ಟಾಂತಕಲಿಕಾ

ಮನುಷ್ಯನಿಗೆ ಹೆಚ್ಚು ವಯಸ್ಸಾದಾಗ ಮನಸ್ಸಿನಲ್ಲಿ ಒಂದು ಪರಿಪಕ್ವತೆ ಉಂಟಾಗುತ್ತದೆ. ಹಳೆಯ ಶ್ರೀಗಂಧದ ಮರದಲ್ಲಿ ಒಳ್ಳೆಯ ಸುವಾಸನೆ ಉಂಟಾಗುತ್ತದೆ.

# ಚಿಂತನ

"ಎಳ್ಳು ಬೆಲ್ಲ ತಿಂದು ಒಂದೊಳ್ಳೆ ಮಾತಾಡು"—ಎಂದು ಸಂಕ್ರಮಣದ ಬಗ್ಗೆ ಒಂದು ಸೂಕ್ತಿಯುಂಟು. ಇದು ನಮ್ಮ ಸನಾತನ ಸಂಸ್ಕೃತಿಯ ಆಚಾರ ವಿಚಾರದ ಸಮನ್ವಯ ಸಿಂಧು. ಈ ಬಿಂದು ಸ್ವರೂಪ ಸೂಕ್ತಿಯಲ್ಲಿ ಸಿಂಧುಸದೃಶ ಅರ್ಥವ್ಯಾಪ್ತಿ ಅಡಗಿದೆ. ಈ ಎಳ್ಳು ಬೀರುವ ಹಬ್ಬವನ್ನು ನಾಡಿನ ಜನತೆ ನಮ್ಮ ಸಂಸ್ಕೃತಿಯ ಹಬ್ಬದ ಆಚರಣಾ ಪದ್ಧತಿಯಾಗಿ ಆಚರಿಸಲ್ಪಡುತ್ತಾ ಬಂದಿದೆ. ಎಳ್ಳನ್ನೇ ಉಪಯೋಗಿಸುವುದ ರಲ್ಲಿ ವೈಚಾರಿಕತೆಯ ಪ್ರಶ್ನೆ. ಎಳ್ಳು ಆಕಾರದಲ್ಲಿ ಸಣ್ಣದಿದ್ದರೂ ಗುಣದಲ್ಲಿ ಅತ್ಯುತ್ತಮ ವಾದದ್ದು. ಬಾಳಿನುದ್ದಕ್ಕೂ ಎಳ್ಳಿನ ಉಪಯೋಗ ಅಧಿಕ. ಧಾರ್ಮಿಕ, ಸಾಮಾಜಿಕ, ಸಾಹಿತ್ಯಕ, ಆರೋಗ್ಯ ಇತ್ಯಾದಿ ಕ್ಷೇತ್ರಗಳಲ್ಲಿ ಎಳ್ಳಿನ ಮಹತ್ವ ಹಾಸುಹೊಕ್ಕಾಗಿದೆ. ದೇವರ ನೈವೇದ್ಯಕ್ಕೆ ಬೇಕು, ದಾನ ಧರ್ಮಾದಿ ಕ್ರಿಯೆಗಳಲ್ಲಿ ಇದರ ಆವಶ್ಯಕತೆ ಬಹ ಳಷ್ಟು ಇದೆ. ಸಾಹಿತ್ಯಕವಾಗಿಯಂತು ಈ ಧಾನ್ಯದ ಬಳಕೆ ವಂಚಿತವಾಗಿಲ್ಲ. "ನೆಲದ ಮರೆಯ ತೈಲದಂತೆ" ಎಂದು ಮಹಾ ವೈರಾಗ್ಯಶಾಲಿನಿ ಅಕ್ಕಮಹಾದೇವಿಯವರು ಹೇಳಿ ದರೆ, "ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತೆ ಎನ್ನುತ್ತಾರೆ ಬಸವಣ್ಣನವರು." 'ಎಳ್ಳಿಂಗೆ ಪರಿಮಳ ವೇಧಿಸಿದಲ್ಲದೆ ಎಣ್ಣೆಗೆ ಪರಿಮಳ ವೇಧಿಸದು"...ಎನ್ನುತ್ತಾರೆ ಪ್ರಭು ದೇವರು. "ಶಿವನು ಎಳ್ಳುಕಾಳು ಮುಳ್ಳು ಮನೆಯಲ್ಲಿಯೂ ಅಡಗಿದ್ದಾನೆ" ಎನ್ನುತ್ತಾರೆ, ಭಗವಂತನ ವ್ಯಾಪ್ತಿ ಕತೆಯನ್ನು ಕುರಿತು ಹೇಳುವರು. ಜಾನಪದ ಕವಿಗಳು "ಬೆಳಗಾಗಿ ನಾ ಎದ್ದು ಯಾರ್ಯಾರ ನೆನೆಯಲೀ ಎಳ್ಳು ಜೀರಿಗೆ ಬೆಳೆಯೋಳ" ಎಂದು ಎಳ್ಳಿನ ಸ್ಮರಣೆ ಅಲ್ಲಿಯೂ ಇದೆ. ಮತ್ತು ವ್ಯಕ್ತಿಯ ಉತ್ತರ ಕ್ರಿಯಾದಿ ಕರ್ಮದಲ್ಲಿ 'ಎಳ್ಳು ನೀರಿನ' ತರ್ಪಣ ಕೊಡುತ್ತಾರೆ. ಹೀಗಾಗಿ ಮನುಷ್ಯನ ಬದುಕಿನಲ್ಲಿ ಹಿರಿಯ ಪಟ್ಟ ಎಳ್ಳಿಗಿದೆ. "ಅಧರಕ್ಕೆ ಕಹಿ ಉದರಕ್ಕೆ ಸಿಹಿ" ಎಂದು ಬೇವಿಗೆ ಹೇಳುವಂತೆ, ತಿನ್ನಲು ಸ್ವಲ್ಪ ಕಹಿಯು ಕಂಡರೂ ಆರೋಗ್ಯ ದೃಷ್ಟಿಯಲ್ಲಿ ದೇಹ ಸೌಷ್ಠವ ದೃಷ್ಟಿಯಲ್ಲಿ ಒಳ್ಳೆಯ ಅನ್ನಾಂಗಯುಕ್ತವಾದ ಆಹಾರ. ಆಯುರ್ವೇದದಲ್ಲಿ ಎಳ್ಳೆಣ್ಣೆಯನ್ನು ಹೆಚ್ಚು ಸಲಹೆ ಮಾಡಿದ್ದಾರೆ. ಇಂತಹ ಪೌಷ್ಠಿಕ ಧಾನ್ಯದ ಜೊತೆಗೆ ಸಿಹಿಯನ್ನು ಸವಿಯಬೇಕು. ಸಂಸಾರ ಸಾಗರದ ಮಧ್ಯೆ ವ್ಯವಹರಿಸುವ ವ್ಯಕ್ತಿಯು ಒಂದಲ್ಲ ಒಂದು ಕಹಿಯಾದ ಪ್ರಸಂಗವನ್ನು ನೆರೆಹೊರೆಯವರೊಡನೆ ಅನುಭವಿಸುತ್ತಾನೆ. ಆ ಕಹಿ ವಾತಾವರಣ ವನ್ನು ನುಂಗಿ ಅರಗಿಸಿಕೊಂಡು, ನೆರೆಯ-ಹೊರೆಯನ್ನು ಕಳೆದು ಪ್ರೇಮಮಯವಾದ ಬದುಕನ್ನು ಸಾಗಿಸುವ ಮುಖ್ಯ ತತ್ತ್ವವಿಲ್ಲಿ ಅಡಗಿದೆ. ಬದುಕಿನಲ್ಲಿ ತೊಂದರೆಗಳು ಅನಿವಾರ್ಯ, ಹಾಗೂ ಆವಶ್ಯಕ. ತೊಂದರೆಗಳು ಬಂದು ಅವುಗಳಲ್ಲಿ ತೇರ್ಗಡೆಯಾದರೆ ಅವನ ಬದುಕು ಪುಟವಿಟ್ಟ ಬಂಗಾರದಂತೆ ಥಳಥಳಿಸುತ್ತದೆ. ಆದ್ದರಿಂದ ನಮ್ಮ ಸುಖ ದುಃಖಗಳನ್ನು ಎಳ್ಳುಬೆಲ್ಲದ ಜೊತೆಯಲ್ಲಿ ನೆರೆ-ಹೊರೆಯವರಲ್ಲಿ ಹಂಚಿಕೊಳ್ಳೋಣ.

# ಕ್ಷೇತ್ರ ವಾರ್ತೆ

ಶ್ರೀ ಕ್ಷೇತ್ರಕ್ಕೂ ಮಲೆನಾಡಿಗೂ ಇರುವ ಮಧುರ ಬಾಂಧವ್ಯ ಇಂದು ನೆನ್ನೆಯದಲ್ಲ. ಆ ಸಂಬಂಧ ಶ್ರೀ ಮದುದ್ದಾನ ಸ್ವಾಮಿಗಳ ಕಾಲದಿಂದಲೂ ಅವ್ಯಾಹತವಾಗಿ ಹರಿದುಬಂದಿದೆ. ಇಂದಿಗೂ ಆ ಮಲೆನಾಡವರು ಅದೇ ತರಹ ಅಪಾರ ಅಭಿಮಾನ, ಅಚ್ಚಲವಾದ ಭಕ್ತಿ, ನಿತರಾಂನಿಷ್ಠೆ– ಇವುಗಳನ್ನು ಶ್ರೀ ಕ್ಷೇತ್ರ ಹಾಗೂ ಶ್ರೀ ಶ್ರೀಗಳವರ ವಿಷಯದಲ್ಲಿ ಮುಂದುವರಿಸಿಕೊಂಡು ಬಂದಿದ್ದಾರೆ. ಅದರಂತೆ ಶ್ರೀ ಶ್ರೀಗಳವರೂ ಸಹ ವರ್ಷಕ್ಕೊಮ್ಮೆ ಮಲೆನಾಡಿನ ಪ್ರವಾಸ ಕೈಗೊಳ್ಳುತ್ತಾರೆ. ಪೂಜ್ಯಪಾದರು ದಯಮಾಡಿಸಿ ಎರಡು ಮೂರು ವಾರಗಳ ಕಾಲ ಆ ಭಾಗದಲ್ಲಿ ಸಂಚಾರಮಾಡಿ ಭಕ್ತರ ಪ್ರಾರ್ಥನೆಯನ್ನು ಈಡೇರಿಸುತ್ತಾರೆ; ಪೂಜಾ, ಉಪದೇಶ, ದರ್ಶನ, ಹಿತಮಿತ ಸಂಭಾಷಣೆ, ಯೋಗಕ್ಷೇಮ ವಿಚಾರಣಾದಿಗಳಿಂದ. ಈ ಒಂದು ಪದ್ಧತಿಯಂತೆ ಈ ವರ್ಷವೂ ಕೂಡ ಶ್ರೀ ಶ್ರೀಗಳವರು ದಿನಾಂಕ 29–11–80 ರಿಂದ 14–12–80 ರವರೆಗೆ ಎರಡು ವಾರಗಳ ಕಾಲ ಮಲೆನಾಡಿನ ಪ್ರವಾಸವನ್ನು ಕೈಗೊಂಡಿದ್ದರು. ಪ್ರವಾಸ ಕಾಲದಲ್ಲಿ ಸಕಲೇಶಪುರ, ನಾರ್ವೆ, ಉದಯವಾರ, ಬಾಳ್ಳು, ಆನೆಮಹಲ್, ಹೊಳಲು, ಚೀಲನಾಯ್ಕನಹಳ್ಳಿ, ಮಳಲಿ, ಐಗೂರು, ಕುಂಭಾರವಳ್ಳಿ, ಬ್ಯಾಕರವಳ್ಳಿ, ರಾಯರ ಕೊಪ್ಪಲು, ಬಳೇರ ಕೊಪ್ಪಲು, ಕುಂದೂರು....ಮುಂತಾದ ಊರುಗಳಿಗೆ ದಯಮಾಡಿಸಿದ್ದರು. ಹೀಗೆ ಪ್ರವಾಸಮಾಡಿ ದಿನಾಂಕ 14–12–80 ರಂದು ಭಾನುವಾರ ಶ್ರೀ ಕ್ಷೇತ್ರಕ್ಕೆ ದಯಮಾಡಿಸಿದರು.

"ನ ಕಾರ್ತಿಕ ಸಮೋಮಾಸಃ"–ಇದು ಸ್ಕಾಂಧ ಪುರಾಣೋಕ್ತಿ. ನಿತ್ಯ ದೀಪೋತ್ಸವ ಕಾರ್ತಿಕ ಮಾಸದ ವಿಶೇಷ. ಶ್ರೀ ಕ್ಷೇತ್ರದಲ್ಲಿ ಈ ವರ್ಷವೂ ಸಂಪ್ರದಾಯದಂತೆ ನಿತ್ಯ ದೀಪಾರಾಧನೆ ನಿತ್ಯ ಪೂಜೋತ್ಸವದೊಂದಿಗೆ ಕಾರ್ತಿಕಪೂಜಾ ಕಾರ್ಯಕ್ರಮ ಜರುಗಿತು. ಈ ಸಮಯದಲ್ಲಿ ಅನೇಕ ಭಕ್ತರಿಂದ ಪ್ರಸಾದ ಕೈಂಕರ್ಯ ನೆರವೇರಿತು. ದಿನಾಂಕ 7–12–80 ರಂದು ಭಾನುವಾರ ಬೆಂಗಳೂರು ನಗರದ ನಗರ್ತಪೇಟೆಯ ಶ್ರೀಜಯದೇವ ಸಿಲ್ಕ್ ಮಾಲೀಕರೂ, ದಾನಿಗಳೂ ಆಗಿದ್ದ ಶ್ರೀಅಂಬಲಿ ಚನ್ನಬಸಪ್ಪನವರ ಕುಟುಂಬದವರು ಅವರ ವಾರ್ಷಿಕಾರಾಧನೆಯ ನಿಮಿತ್ತ ಶ್ರೀಮಠದ ವಿದ್ಯಾರ್ಥಿಗಣಕ್ಕೂ ಮತ್ತು ಆಗಂತುಕ ಸಮಸ್ತ ಭಕ್ತರಿಗೂ ದೊಡ್ಡ ಪ್ರಮಾಣದಲ್ಲಿ ವಿಶೇಷ ಭೋಜನ ಸೇವಾವ್ಯವಸ್ಥೆಯನ್ನು ಮಾಡಿಸಿ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿಯ ಮತ್ತು ಶ್ರೀ ಶ್ರೀಗಳವರ ಕೃಪೆಗೆ ಪಾತ್ರರಾಗಿದ್ದಾರೆ. ಮತ್ತು ಅವರು ಪ್ರತಿ ವರ್ಷವೂ ಶ್ರೀ ಮಠಕ್ಕೆ ದವಸ ಧನರೂಪದಲ್ಲಿ ದಾನಮಾಡುತ್ತಿದ್ದಾರೆ. ಇಂಥ ಕಾರ್ತಿಕ ಕೈಂಕರ್ಯವನ್ನು ನಡೆಸಿಕೊಟ್ಟ ಅವರ ಕುಟುಂಬದವರಿಗೂ ಮತ್ತು ಅವರಿಗೂ ದಯಾಮಯನಾದ ಪರಶಿವನು ಪುಣ್ಯ ಕಾರ್ತಿಕವನ್ನು ಕರುಣಿಸಲಿ.

# ಮರ್ತ್ಯಲೋಕದ ಮಹಾಬೆಳಗು ಉದ್ಧಾನಯತೀಶ

—ಚನ್ನಪ್ಪ ಎರೇಸೀಮೆ

## ಸಿದ್ಧಲಿಂಗೇಶ್ವರನ ಸನ್ನಿಧಿಗೆ ತಂದ ಬೋಳಬಸವೇಶ್ವರರ ಕಾರುಣ್ಯ ಶಿಶು :

ಇತ್ತ ರುದ್ರಪ್ಪ ತನ್ನ ಮುಂದಿನ ಹಾದಿಯೇನೆಂಬುದನ್ನು ನಿರ್ಧರಿಸಿಬಿಟ್ಟಿದ್ದ. ಬೆಳಗಿನ ಬ್ರಾಹ್ಮೀ ಮುಹೂರ್ತ ತಲೆದೋರಿದ ಕಾಲ, ಮುಂಗೋಳಿ ಕೂಗಿತು. ತಾನು ಆಡನ್ನು ಮಾರಿ ತಂದಿದ್ದ ಎರಡು ರೂಪಾಯಿಯನ್ನು ಮುಟ್ಟಲಿಲ್ಲ. ಅಲ್ಲಿಯೇ ತಾನು ಮಲಗುವ ಹಾಸಿಗೆಯ ಮೇಲೆ ಇಟ್ಟ. ಜನ್ಮ ಸಂಬಂಧದ ದುರಾಶೆಯನ್ನು ನೀಗಿದ. ಸಂಸಾರ ಜೀವನ ಕ್ಕಂಟಿ ಬಂದಿದ್ದ ಅನೇಕ ಬಂಧಗಳನ್ನೆಲ್ಲ ಒಂದೊಂದಾಗಿ ಕತ್ತರಿಸಿ ಹಾಕಿದ. ಮನೆ ನೆಳಲನ್ನು ನೆನೆಯಲಿಲ್ಲ, ಧನ ಧಾನ್ಯಾದಿ ಅರ್ಥ ಸಂಪತ್ತನ್ನು ಲಕ್ಷಿಸಲಿಲ್ಲ. ಬಂಧು ಬಳಗ ಅಣ್ಣ ತಮ್ಮ ತಂದೆ ತಾಯಿಯೆಂಬ ಯಾವ ಒಂದು ಸಂಬಂಧದಲ್ಲಿ ಕಿಂಚಿತ್ತೂ ಆಸೆ ಮನಸ್ಸಿನ ಮುಂದೆ ಸುಳಿಯಲಿಲ್ಲ. ದೃಢ ನಿರ್ಧಾರದ ಮಹಾಮೇರುವೇ ನಡೆದು ಹೊರಡುವಂತೆ ಪಶ್ಚಿಮಾಭಿ ಮುಖವಾಗಿ ಹೊರಟ. ಬೆಳಕು ಹರಿಯುವ ಹೊತ್ತಿಗೆ ಗೋಸಲ ಸಿದ್ಧೇಶ್ವರರ ತಪೋ ಮಹಿಮಾತಿಶಯದಿಂದ ಪರಿಪೂತವೂ, ಸಿದ್ಧಲಿಂಗೇಶ್ವರರ ಸಾನಿಧ್ಯದಿಂದ ಭೂಸ್ವರ್ಗ ಸದೃಶವೂ ಆದ ಸಿದ್ಧಗಂಗಾ ಕ್ಷೇತ್ರಕ್ಕೆ ಬಂಧನಕ್ಕೊಳಗಾಗಿದ್ದ ಗಜವು ತನ್ನ ವನದ ಗಜಗಳ ಗುಂಪಿಗೆ ಬಂದು ಸೇರಿಕೊಳ್ಳುವಂತೆ ಸೇರಿಕೊಂಡು ಬಿಟ್ಟ. ಈ ಪೂರ್ವದಲ್ಲಿ ರುದ್ರಪ್ಪ ಸಿದ್ಧಗಂಗೆಗೆಂದು ಎಷ್ಟೋ ಸಲ ಬಂದಿದ್ದ, ಇಲ್ಲಿಗೆ ಬಂದು ಸಿದ್ಧಗಂಗಾ ಬೆಟ್ಟ, ರಾಮಲಿಂಗೇಶ್ವರ ಬೆಟ್ಟಗಳಲ್ಲೆಲ್ಲ ಸುತ್ತಾಡಿದ್ದ. ಇಲ್ಲಿನ ದಾಸೋಹದ ಪ್ರಸಾದ ಸ್ವೀಕರಿಸಿದ್ದ. ಅಡಿವೆಪ್ಪ ಸ್ವಾಮಿಗಳನ್ನು ದೂರದಿಂದಲೇ ಕಂಡು ಎಲ್ಲರಂತೆ ನಮಸ್ಕರಿಸಿ ಹೋಗುತ್ತಿದ್ದ. ಆದರೆ ಅವರ ಪರಿಚಯ ಮಾಡಿಕೊಂಡಿರಲಿಲ್ಲ, "ಹತ್ತರೊಡನೆ ಹನ್ನೊಂದಾಗಿ ಪರಿಷೆಯೊಡನೆ ಮಹದೇವ" ಎನ್ನುವಂತೆ ಎಲ್ಲರಂತೆ ಬಂದು ಎಲ್ಲರಂತೆ ನಮಸ್ಕರಿಸಿ ಅನೇಕ ಗಂಟೆಗಳ ಕಾಲ ಅಮ್ಮನವರ ಗವಿಯಲ್ಲಿ ಕುಳಿತು ಪ್ರಭಾವಿತನಾಗಿ ಹೋಗುತ್ತಿದ್ದ. ಅಂದಿನ ದಿನಗಳ ರೀತಿಯೇ ಬೇರೆ. ಇಂದಿನ ರೀತಿಯೇ ಬೇರೆ. ಇಂದು ಅವನನ್ನು ಎಳೆದುಕೊಂಡು ಬಂದದ್ದು ಅವನ ಮನಸ್ಸಾಗಿರಲಿಲ್ಲ. ಯಾವುದೋ ಅಗೋಚರ ಶಕ್ತಿಯ ಬಂಧನ.

ಆಗತಾನೆ ಕ್ಷೇತ್ರದ ದಾಸೋಹ ಮೂರ್ತಿಗಳಾಗಿದ್ದ ಅಡವೀಶ್ವರರು ತಮ್ಮ ಬೆಳಗಿನಪೂಜೆಯನ್ನು ಮುಗಿಸಿಕೊಂಡು ಬಂದು ಮಠದ ಮುಂಭಾಗದ ಮುಂಚದ ಮೇಲೆ ಮಂಡಿಸಿದ್ದರು



ಉದ್ದಾನಶಿವಯೋಗಿಗಳು ಅನೇಕಬಾರಿ ಸುತ್ತಾಡಿದ್ದ ಸಿದ್ಧಗಂಗೆಯ ಅವಳಿ ಬೆಟ್ಟ, ರಾಮಲಿಂಗೇಶ್ವರ ಬೆಟ್ಟ.

ಅವರ ಮುಖ ಭಸ್ಮದಿಂದ ಮುಸುಗಿತ್ತು. ಕೆಂಜಡೆ ಬೆನ್ನ ಮೇಲೆ ನೇತಾಡುತ್ತಿತ್ತು. ಶುಭ್ರವಾದ ಕಷಾಯ ವಸ್ತ್ರದಿಂದ ಪರಿಶೋಭಿಸುತ್ತಿದ್ದ ಸಾಕ್ಷಾತ್ ಸಿದ್ಧೇಶ್ವರನಂತೆ ಕಾಣುವ ಆ ಮಂಗಲ ಮೂರ್ತಿಯನ್ನು ಕಾಣುತ್ತಲೇ ರುದ್ರಪ್ಪ ಓಡಿಹೋಗಿ ಪಾದಗಳ ಮೇಲೆ ಬಿದ್ದು ಹೊರಳಾಡಿದನು. ಅಡವೀಶ್ವರರು ಈತನು ಬಂದು ಹೀಗೆ ಅತ್ಯುತ್ಕಟ ಭಕ್ತಿ ಭಾವದಿಂದ ನಮಸ್ಕರಿಸಿದ ನಮಸ್ಕಾರದಲ್ಲಿ ಏನೋ ಒಂದು ಹೊಸತನವನ್ನು ಕಂಡರು. 15-16 ರ ಹರೆಯದವನಾಗಿದ್ದರೂ ರುದ್ರಪ್ಪ ಇಪತ್ತು ಇಪ್ಪತ್ತೆರಡರ ಹರೆಯದ ಮೈ ಕಟ್ಟನ್ನು ಹೊಂದಿದ್ದ. ಕಣ್ಣು ಹೊಳಪು, ಹಾಗು ಧೃಢನಿರ್ಧಾರದ ಅಸಾಧಾರಣ ತೇಜದಿಂದ ಹೊಳೆಯುತ್ತಿದ್ದವು. ಮುಖಮಂಡಲದ ಕಾಂತಿಯಲ್ಲಿ ಅಪೂರ್ವ ತೇಜೋರಾಶಿ ತುಂಬಿತ್ತು. ಇಂಥ ಓರ್ವ ಯುವಕ ಬೆಳಕು ಹರಿಯುವುದರೊಳಗಾಗಿ ಬಂದು ತಮ್ಮ ಸನ್ನಿಧಿಯಲ್ಲಿ ಹೀಗೆ ಕೈಂಕರ್ಯದ ಪರಮಾವಧಿಯಿಂದ ಹೊರಳಾಡುವುದನ್ನು ಕಂಡ ಅಡವೀಶ್ವರರಲ್ಲಿ ಕಾರುಣ್ಯ ಉಕ್ಕಿತು. ಮೇಲೇಳು. ಯಾವ ಊರು ಏನು ನಿಮಿತ್ತ ಇತ್ಯಾದಿ ಕುಶಲ ಪ್ರಶ್ನೆಗಳನ್ನು ಕೇಳತೊಡಗಿದರು. ರುದ್ರಪ್ಪ ತನ್ನ ಪೂರ್ವೋತ್ತರಗಳನ್ನೆಲ್ಲ ಹೇಳಿ ಶ್ರೀ ಕ್ಷೇತ್ರದಲ್ಲಿಯೇ ಇರುವುದಕ್ಕೆ ಬಂದಿರುವೆನೆಂದು ಅಟವೀಶ್ವರರಿಗೆ ತಿಳಿಸಿದನು.

'ಇಲ್ಲಿ ಊಟ ಮಾಡಿಕೊಂಡು ಇರುವವರಿಗೆ ಸ್ಥಾನವಿಲ್ಲ' ಎಂದರು ಅಡವೀಶರು. ಅದಕ್ಕೆ 'ಇಲ್ಲ' ನಾನಿಲ್ಲಿ ಊಟ ಮಾಡಿಕೊಂಡು ಕಾಲಕಳೆಯುವ ನಿಮಿತ್ತ ಬಂದವನಲ್ಲ'

ಎಂದ, ಮೇಘ ಮಂದರ ಧ್ವನಿಯಲ್ಲಿ ರುದ್ರಪ್ಪ. ಆಗ ಅಟವೀಶ್ವರರು–'ಇಲ್ಲಿಯ ಕೆಲಸ ಕಾರ್ಯಗಳು ಬಹಳ ಕಷ್ಟದವು; ಇದು ದಾಸೋಹ ಕ್ಷೇತ್ರ ಸಾದೇ ಸೊಪ್ಪು ಹೊಂದಿಸ ಬೇಕು; ವ್ಯವಸಾಯ ಮಾಡಬೇಕು, ನೆಲ ಅಗಿಯಬೇಕು, ಕಟ್ಟಡ ಕಟ್ಟಬೇಕು. ಈ ಎಲ್ಲ ಕೆಲಸಗಳ ಅನುಭವ ನಿನಗೆ ಇದೆಯೇ ಎಂದರು. ಆಗ ರುದ್ರಪ್ಪ ನಿರ್ಧಾರ ಧ್ವನಿಯಲ್ಲಿ–'ಗುರುದೇವ, ಅಂಥ ಇಂಥ ಕೆಲಸವೆಂದರೇನು? ತಾವು ಪಾದದಿಂದ ತೋರಿಸಿದ ಕೆಲಸವನ್ನು ತಲೆಯಿಂದ ಮಾಡಿ ಮುಗಿಸುತ್ತೇನೆ. ಈ ನಿರ್ಧಾರದಿಂದಲೇ ಈ ಪುಣ್ಯ ಕ್ಷೇತ್ರಕ್ಕೆ ಹೆಜ್ಜೆಯಿಟ್ಟಿದ್ದೇನೆ. ಮನೆ ಮಠದ ಹಂಗು ತೊರೆದ ನನಗೆ ಪೂಜೆ ಪ್ರಸಾದವೊಂದು ನಡೆದರೆ ಸಾಕು ಅದಕ್ಕಾಗಿ ಯಾವ ಬೆಲೆಯನ್ನಾದರೂ ತೆತ್ತಬಲ್ಲೆ. ಈ ಕ್ಷೇತ್ರ ಹಿತವೇ ನನ್ನ ಹಿತ; ಶ್ರೀಮದನಾದಿ ಸಿದ್ಧಲಿಂಗೇಶ್ವರರ ಸೇವೆಗೆ ಈ ಪರಿಪುಷ್ಟವಾದ ಕ್ರಿಯಾಂಗದ ಶಕ್ತಿಯೆಲ್ಲ ಮೀಸಲು, ಮನ ಮೀಸಲು, ಭಾವ ಮೀಸಲು, ಅನಾಥ ನಾಥನು ಅನಿಮಿತ್ತ ಬಂಧುವೂ ಆದ ಸಿದ್ಧಲಿಂಗೇಶನೇ ನನ್ನ ತಾಯಿ ತಂದೆ, ಕುಲ ಬಲ ಛಲ ಎಲ್ಲವೂ ಆಗಿದ್ದಾನೆಂದೇ ದೃಢವಾಗಿ ನಂಬಿ ಆತನು ನಡೆಸಿದಂತೆ ನಾನು ಇಲ್ಲಿಗೆ ನಡೆದು ಬಂದಿದ್ದೇನೆ. ನಾನು ಇಲ್ಲಿಗೆ ಹೆಣ್ಣಿಗಾಗಿ, ಮಣ್ಣಿಗಾಗಿ, ಹೊನ್ನಿಗಾಗಿ ಬಂದವನಂತೂ ಮೊದಲೇ ಅಲ್ಲ. 'ರುದ್ರಪ್ಪನ ಈ ದೃಢ ನಿರ್ಧಾರದ ಧ್ವನಿಯಲ್ಲಿ ಅಡವಿ ಸ್ವಾಮಿಗಳು ಹಿಂದೆಂದೂ ಯಾವ ವಾಣಿಯಲ್ಲೂ ಕಾಣದ ಒಂದು ಅಪೂರ್ವ ತೇಜಸ್ಸನ್ನು ಕಂಡರು. ಶ್ರೀ ಕ್ಷೇತ್ರದಲ್ಲಿರಲು ಅಪ್ಪಣೆಯಿತ್ತರು. ಆತನ ಪೂಜೆ ಪ್ರಸಾದಕ್ಕೆ ವ್ಯವಸ್ಥೆ ಮಾಡಿದರು. ರುದ್ರಪ್ಪ ಪೂಜೆ ಪ್ರಸಾದ ಮುಗಿಸಿ ಆ ದಿನ ಸಂಜೆಯವರೆಗೆ ಗುದ್ದಲಿ ಹಿಡಿದು ನೆಲ ಅಗಿಯುವ ಕೆಲಸ ಮಾಡಿದ. ಕೈಯೆಲ್ಲ ಕೆಂಪಾಗಿ ಗುಳ್ಳೆಗಳೆದ್ದವು. ರಾತ್ರಿ ಪುನಃ ಪೂಜೆ ಮುಗಿಸಿ ಪ್ರಸಾದ ಸ್ವೀಕರಿಸಿ ಮಲಗಿದ. ಅಡವಿ ಸ್ವಾಮಿಗಳು ಆ ಒಂದೇ ದಿನದ ಅವನ ಕೆಲಸ ಕಾರ್ಯಗಳನ್ನು ಅವನ ಪೂಜಾನಿಷ್ಠೆಯನ್ನೂ ಕಂಡು ಪ್ರಸನ್ನ ಚಿತ್ತರಾದರು. ದಿನದಿನವೂ ಮಠದ ಕೆಲಸಕಾರ್ಯಗಳಲ್ಲಿ ಅಸೀಮ ಶ್ರದ್ಧಾ ಸಕ್ತಿಯಿಂದ ದುಡಿಯತೊಡಗಿದ. ಅವನ ವಿಷಯದಲ್ಲಿ ಕಾರುಣ್ಯ ಉಕ್ಕತೊಡಗಿತು. ಅನುಗ್ರಹ ಬುದ್ಧಿ ಮೊಳೆಯತೊಡಗಿತು. ಅವನ ವೇಷದ ಮರೆಯ ಶಿವಾನುಭಾವ ಸಂಪತ್ತಿಗೂ, ಅಚಲ ನಿರ್ಧಾರದ ಕ್ರಿಯಾಶಕ್ತಿಗೂ ಮಾರು ಹೋದರು. ಈತನ ನಡೆ ನುಡಿಗಳಲ್ಲಿ ಮಹಾ ಕಾರಣಿಕರಲ್ಲಿರಬೇಕಾದ ಶಕ್ತಿಗಳು ಬೀಜರೂಪವಾಗಿ ಅಡಗಿವೆ ಎಂಬುದನ್ನು ಅರಿತುಕೊಂಡರು. ದಿನೇ ದಿನೇ ಸಿದ್ಧಲಿಂಗೇಶ್ವರರ ಮತ್ತು ಸಿದ್ಧಗಂಗಾ ಮಾತೆಯರ ಸೇವೆಯಲ್ಲಿ ತನ್ನನ್ನು ಸಂಪೂರ್ಣ ಕರಗಿಸಿಕೊಂಡು ಅವರ ಪಾದ ಕಮಲ ಮಕರಂದ ಭೃಂಗನಂತೆ ವ್ಯವಹರಿಸುವ ರುದ್ರಪ್ಪನೇ ಈ ಕ್ಷೇತ್ರ ಪುರುಷನೆಂದು ಗುರುತಿಸತೊಡಗಿದರು. ತಮ್ಮ ಇಚ್ಛೆಯೊಳಗೆ ಮೂಡಿ ಬಂದ ಕಾರ್ಯಗಳನ್ನೆಲ್ಲ ರುದ್ರಪ್ಪ ಇವರು ಹೇಳುವ ಪೂರ್ವದಲ್ಲೇ ಮಾಡಿ ಮುಗಿಸುತ್ತಿರುವುದಕ್ಕೆ ಅಡವಪ್ಪನವರಿಗೆ ಅಪಾರ ಸಂತೋಷವಾಗತೊಡಗಿತು.

**ಲೋಕಜೀವನಕ್ಕಂಟಿಯೂ ಅಂಟದ ಮಹಾಮಹಿಮನ ಹಸ್ತಗುಣದ ಪರಿಣಾಮ:**

ರುದ್ರಪ್ಪನ ಮರೆಯಲ್ಲಿನ ಶಿವಯೋಗ ಶಕ್ತಿಯ ಪರಿಚಯ ಪ್ರಥಮತಃ ಆದುದು ಅಡ

ಸಿದ್ಧಗಂಗಾ

ಪಪ್ಪನವರಿಗೆ ಮಾತ್ರ. ಮನೆಯ ಯಾರೂ ಅವರನ್ನು ಗುರುತಿಸಲಸಮರ್ಥರಾದರು
ಇದನ್ನೇ ಮಾಯೆಯೆಂದು ಕರೆದರು. ಪುರಾಕೃತಕರ್ಮದ ಪೆರ್ಮೆಯಲ್ಲಿ ಸುಜ್ಞಾನದ ತೀ
ವಳಿಕೆ ಮೂಡಲು ಸಮಯ ಹೆಚ್ಚುಬೇಕು. ರುದ್ರಪ್ಪ ಲೋಕಜೀವನಕ್ಕೆ ಅಂಟಿಯೂ ಅಂ
ದಂಥ ಶಿವಾರ್ಪಣಭಾವದಲ್ಲಿ ಬಾಲ್ಯದಿಂದಲೂ ಬೆಳೆದು ಬಾಳುತ್ತ ಬಂದ ಸ್ವತಂತ್ರವ್ಯ
ಇವನ ಹುಟ್ಟಿನ ಹಿನ್ನೆಲೆಯಲ್ಲಿ ಅದ್ಭುತವಡಗಿದ್ದರೂ ಲೌಕಿಕರಾದ ಮಾತಾಪಿತೃಗಳ
ಇದರ ಹರಿವಾಗದೆ ಹೋದದ್ದು ಸಹಜವೇ. ಅವರಿಗೆ ಇದ್ದ ಪುತ್ರನ ಬಗೆಗಿನ ಚಿಂತೆಯ
ಸ್ವರೂಪವೇ ಬೇರೆ. ಸದಾ ಚಿದವಸ್ಥೆಯಲ್ಲಿ 'ಆತ್ಮನ್ಯೇವಾತ್ಮನಾತುಷ್ಟಃ, ಆತ್ಮಕ್ರೀಡಃ, ಆ
ರತಿಃ,' ಎಂಬಂತೆ ತನ್ನ ಪೂರ್ಣಬಾಳನ್ನು ಬೆಳಗಿಸುವುದರ ಮೂಲಕ ಲೋಕದ ನಡೆಗಿಂ
ಭಿನ್ನನಾಗಿ ಕಾಣುವ ರುದ್ರಪ್ಪನನ್ನು ನೋಡಬೇಕಾದ ಕಣ್ಣಿನಿಂದ ತಂದೆತಾಯಿಗಳಿಗೆ ನೋ
ಲಾಗಲಿಲ್ಲ. ರುದ್ರಪ್ಪ ಭೌತವಸ್ತುಗಳಲಿಲ್ಲದ ಅಮೃತ ರಸನಿಧಿ ಪರಮಾತ್ಮ ಸಾಕ್ಷಾತ್ಕಾರದ
ಇದೆ ಎಂಬುದನ್ನು ಅರಿತು ಆ ಮಾರ್ಗದಲ್ಲಿ ಸಾಗಬೇಕೆಂದು ಬಯಸಿ ಭಾವಿಸಿ ಸಹಜಾಚರಣೆ
ತನ್ನನ್ನು ತಾನು ಸಿದ್ಧಗೊಳಿಸಿಕೊಳ್ಳುತ್ತಿದ್ದ. ಅವರ ಜೀವನ ಕಥೆಯಲ್ಲಿ ಶಿವಲೀಲೆಯೋ
ಭೂತ ತೃಪ್ತಿಯೇ ಕಾರಣಪುರುಷರ, ಆಗಾದ ಸಂಕಲ್ಪ ಶಕ್ತಿಯು ಅವರ ಸಮಗ್ರಕ್ರಿಯಾ
ಮುಖದಲ್ಲೂ ಬಾಲ್ಯದಿಂದಲೂ ಬೆಳೆದು ಬಂದಿತ್ತು. ಶಿವಸಾಮ್ರಾಜ್ಯದ ಸದ್ಭಕ್ತ ಸಾ
ಭೌಮನಿಗಿರಬೇಕಾದ ಗುಣಗಳು ಬೀಜರೂಪದಲ್ಲಿ ಬಾಲಕ ರುದ್ರಪ್ಪನಲ್ಲಿ ಇದ್ದುದನ್ನು ಗುರು
ತಿಸಲು ಮನೆಯ ಬಳಗಕ್ಕೆ ಶಕ್ಯವಿಲ್ಲದಿದ್ದರೂ ಕೆಲವೇ ದಿನಗಳಲ್ಲಿ ಅಡವಪ್ಪ ಸ್ವಾಮಿಗಳ
ಮಾತ್ರ ಗುರುತಿಸಿಟ್ಟುಕೊಂಡು ಬಿಟ್ಟರು. ಒಮ್ಮೆ ರುದ್ರಪ್ಪನ ಘನತೆಯನ್ನು ಅವರ ಹಸ್ತ
ಗುಣವನ್ನು ಶ್ರದ್ಧಾಶಕ್ತಿಯನ್ನೂ ಮತ್ತು ಕುಶಲತೆಯನ್ನು ಸಮೀಪದಿಂದಲೇ ನೋಡು
ಪ್ರಸಂಗ ಅಡವಿ ಸ್ವಾಮಿಗಳಿಗೆ ಒದಗಿತು.

ಧನುರ್ಮಾಸ ಬಂತು ಅಡವಪ್ಪನವರಿಗೆ ಅಡಿಗೆ ಮಾಡುವವರು ಯಾರು ಇರಲಿಲ್ಲ
ರುದ್ರಪ್ಪನನ್ನೇ ತಾತ್ಕಾಲಿಕವಾಗಿ ಆ ಕೆಲಸಕ್ಕೆ ನೇಮಿಸಿದರು. ಸರಿ ರುದ್ರಪ್ಪ ಅಡವಿಸ್ವಾಮಿಗಳ
ಬಾಣಸಿಗತನಕ್ಕೆ ಕೈಂಕರ್ಯ ಹಿಡಿದು ಒಂದು ತಿಂಗಳು ಶ್ರದ್ಧಾ ಭಕ್ತಿ ವಿಶ್ವಾಸಗಳಿಂದ ಅಡವಿ
ಸ್ವಾಮಿಗಳ ಖಾಸಾಸೇವೆ ಮಾಡಿ ಮುಗಿಸಿದ. ಇದರ ಪರಿಣಾಮದಿಂದ ಅಡವೀಸ್ವಾಮಿಗಳ
ಜೀವನದ ಮೇಲಾದ ಮಹತ್ವದ ಪರಿಣಾಮವನ್ನು ಕಂಡು ಅವಾಕ್ಕಾದರು. ಅವರು ರುದ್ರಪ್ಪ
ನನ್ನು ಅಪಾದ ಮಸ್ತಕದವರೆಗೆ ದಿಟ್ಟಿಸಿ ನೋಡತೊಡಗಿದರು. ರುದ್ರಪ್ಪನಲ್ಲಿ ಇನ್ನೂ ಹೆಚ್ಚು
ಹೆಚ್ಚಿನ ಶಕ್ತಿ ಸಂಚಾರವಾಗತೊಡಗಿತು. ಅಡವೀಸ್ವಾಮಿಗಳಲ್ಲಿ ಅನೇಕ ದಿನಗಳಿಂದ ಮನೆ
ಮಾಡಿಕೊಂಡಿದ್ದ ಗೂರಲು ಬೇನೆ ಆ ಧನುರ್ಮಾಸದಲ್ಲಿ ಹಾರಿ ಹೋಗಿ ಅವರು ಪೂರ್ಣ
ಆರೋಗ್ಯಭಾಗ್ಯದಿಂದ ಕೂಡಿದರು. ರುದ್ರಪ್ಪನ ಹಸ್ತಗುಣದಲ್ಲಿದ್ದ ಶುದ್ಧಿಯನ್ನು ಕಾಣಲು
ಅಡವಪ್ಪನವರಿಗೆ ಸನ್ನಿವೇಶ ಬಹಳ ನೆರವಾಯಿತು. ಕ್ರಿಯಾಶುದ್ಧಿ, ಹಸ್ತಶುದ್ಧಿ ಭೂತತೃಪ್ತಿ
ಗಳಿಂದ ಕ್ಷೇತ್ರದ ಸೇವೆಯಲ್ಲಿ ತನುಮನ ಸಂಪೂರ್ಣ ತೊಡಗಿಸಿಕೊಂಡ ರುದ್ರಪ್ಪನ ಮೇಲೆ

ಅಡವಿಯಪ್ಪನವರು ತಮ್ಮ ತಪಶ್ಶಕ್ತಿಗೆ ಕಾರುಣ್ಯಾಮೃತವನ್ನು ಎರೆಯತೊಡಗಿದರು. ಇವರಿಂದ ರುದ್ರಪ್ಪ ಇನ್ನೂ ತೇಜಶ್ಶಾಲಿಯಾಗತೊಡಗಿದ. ಇವನನ್ನು ಈ ಕ್ಷೇತ್ರಾಧಿಪತಿಯಾದ ಗೋಸಲ ಸಿದ್ಧೇಶ, ಶಂಕರಸ್ವಾಮಿ, ಚನ್ನಬಸವೇಶ, ಸಿದ್ಧಲಿಂಗೇಶ್ವರರೆ, ಇಲ್ಲಿಗೆ ಕರೆಸಿಕೊಂಡರೆಂಬ ಭಾವನೆ ಅಡವ್ಯಪ್ಪನವರಿಗೆ ದಿನೇ ದಿನೇ ಪ್ರಬಲವಾಗತೊಡಗಿತು.

## ಮಾತೃ ವಾತ್ಸಲ್ಯದ ಸೆರೆಯನ್ನು ಹರಿದ ರುದ್ರಪ್ಪ.

ಇಲ್ಲಿ ಇನ್ನೊಂದು ವಿಷಯವನ್ನು ತಿಳಿಸುವುದು ಅವಶ್ಯಕ. ರುದ್ರಪ್ಪ ಲಕ್ಕೂರಿನ ತನ್ನ ಮನೆಯಲ್ಲಿ ತಾನು ಮನೆ ಬಿಟ್ಟು ಹೊರಡುವುದಕ್ಕೆ ಮೊದಲು ಒದಗಿದ ಕಾರಣಗಳ ಹಿನ್ನಲೆಯಲ್ಲಿ ಮಾತಾಪಿತೃಗಳು ಇಂಥ ಒಬ್ಬ ಮಗನನ್ನು ಸಂಸೈಸಲು ತಮಗಾಗದೆ ಹೋದ ವಿಧಿಗಾಗಿ ಮರಮರ ಮರುಗಿದರು. ಏನಾದರೂ ಮಾಡಿ ಮಗನನ್ನು ಹುಡುಕಿತರಲು ಪ್ರಯತ್ನಿಸತೊಡಗಿದರು. ಅವನು ಮನೆ ಬಿಟ್ಟು ಅನೇಕ ದಿನಗಳು ಎಲ್ಲಿಗೆ ಹೋದನೆಂಬುದೇ ಇವರಿಗೆ ತಿಳಿಯಲಿಲ್ಲ. ಮೊದ ಮೊದಲು ಒಂದೆರಡು ದಿನಗಳು ಸಿದ್ಧನಬೆಟ್ಟದ ಗುಹೆಗಳಲ್ಲಿ ಎಲ್ಲಾದರೂ ಅಡಗಿ ಕುಳಿತನೇ? ಹಾಳು ಹರಕು ಕೋಟೆಯ ಮೂಲೆಯಲ್ಲಿ ಅವಿತುಕೊಂಡನೇ ? ಬಂಧು ಬಳಗದವರ ಮನೆ ಮಠಗಳನ್ನು ಆಶ್ರಯಿಸಿಕೊಂಡನೇ, ಎಂದು ಎಲ್ಲೆಲ್ಲೂ ಹುಡುಕಿದರು.



ಉದ್ದಾನಶಿವಯೋಗಿಗಳು ಪಶುಪಾಲನೆಗೆ ತೆರಳುತ್ತಿದ್ದ ಸಿದ್ಧನಬೆಟ್ಟದ ಪ್ರದೇಶ.

ಕೊನೆಗೆ ಸಿದ್ಧಗಂಗೆಯಲ್ಲಿ ಸೇರಿಕೊಂಡಿರುವ ವಿಷಯವನ್ನು ಕರ್ಣಾಕರ್ಣಿಯಾಗಿ ಕೇಳಿ ತಾಯಿ ಮರುಳಸಿದ್ದಮ್ಮನವರೇ ಬಂಡಿಯನ್ನು ಕಟ್ಟಿಸಿಕೊಂಡು ಶ್ರೀ ಕ್ಷೇತ್ರದ ದಾಸೋಹಕ್ಕೆ ರಾಗಿ, ಅಕ್ಕಿ, ಹುಣಸೇಹಣ್ಣು ಮೂಟೆಗಳನ್ನು ತುಂಬಿ ಕೊಂಡು ಬಂದರು. ತನ್ನ ತಾಯಿ ಮಠಕ್ಕೆ ಬಂದ ಸುಳಿವು ರುದ್ರಪ್ಪನಿಗೆ ಹೇಗೋ ಗೊತ್ತಾಯಿತು. ಆಗ ಅವರು ಯಾರಿಗೂ ತಿಳಿಯದಂತೆ ಅಮ್ಮನವರ ಗವಿಯನ್ನು ಪ್ರವೇಶಿಸಿ ಒಂದು ಮೂಲೆಯಲ್ಲಿ ಶಿವಪೂಜೆ ಮಾಡುತ್ತಾ ಕುಳಿತುಬಿಟ್ಟರು. ಹೊರಗಿನ ಜಗತ್ತಿಗೂ ತಮಗೂ ಯಾವ ಸಂಬಂಧವೂ ಇಲ್ಲದಂತಹ ಸನ್ನಿವೇಶವನ್ನು ನಿರ್ಮಾಣ ಮಾಡಿಕೊಂಡು ಬಿಟ್ಟರು.

ಮರುಳಸಿದ್ದಮ್ಮನವರು ಬಂದು ದಾಸೋಹ ಕ್ಷೇತ್ರಕ್ಕೆ ತಮ್ಮ ಕಾಯಕಾರ್ಜಿತ ಪಡಿಪದಾರ್ಥಗಳನ್ನೊಪ್ಪಿಸಿ ಅಡವಿಸ್ವಾಮಿಗಳ ಸನ್ನಿಧಿಗೆ ಬಂದು ತನ್ನ ಮಗ ರುದ್ರಪ್ಪನ ವಿಚಾರವಾಗಿ ಮನೆಯಲ್ಲಿ ನಡೆದ ಸಮಗ್ರ ವಿಷಯವನ್ನು ತಿಳಿಸಿ "ಸ್ವಾಮಿ, ಏನಾದರೂ ಮಾಡಿ ನನ್ನ ಮಗನನ್ನು ಬುದ್ಧಿ ಹೇಳಿ ನನ್ನ ಮನೆಗೆ ಮರುಳುವಂತೆ ಮಾಡಿರೆಂದು ಹೇಳಿಕೊಳ್ಳತೊಡಗಿದರು. ಆಗ ಅಡವಪ್ಪನವರು ರುದ್ರಪ್ಪನನ್ನು ಹುಡುಕಿಸಿದರು. ರುದ್ರಪ್ಪ ಎಲ್ಲಿಯೂ ಕಣ್ಣಿಗೆ ಗೋಚರಿಸಲಿಲ್ಲ. ಆಗ ಅಡವಪ್ಪನವರು 'ಅಮ್ಮ' ಅವನನ್ನು ನೀವು ನಿಮ್ಮ ಮಗನೆಂದು ಭಾವಿಸಿರಬಹುದು, ಅವನೊಬ್ಬ ಅಗಣ್ಯಪುಣ್ಯ ಪುರುಷ. ಅವನ ರೀತಿನೀತಿಗಳು ಲೋಕ ಲೌಕಿಕರಂತಲ್ಲ. ಅಸಾಧಾರಣ ವ್ಯಕ್ತಿತ್ವವನ್ನು ಸಂಪಾದಿಸಿಕೊಂಡಿರುವ ಅವನಿಗೆ ಬುದ್ಧಿ ಹೇಳಲು ನಾನಾರು? ಅವನು ನಿಮ್ಮ ಮೇಲೆ ಮುನಿಸಿಕೊಂಡುಬಂದಿಲ್ಲ. ನಿಮ್ಮ ಮನೆಯಲ್ಲಿ ನಡೆದ ಪ್ರಸಂಗವೊಂದು ನೆಪ ಮಾತ್ರ. ಪ್ರಬಲ ವೈರಾಗ್ಯನಿಧಿಗಳಿಗೆ ಒಂದೊಂದು ನೆಪದ ಮೂಲಕ ಮಹತ್ತರವಾದ ಜೀವನ ಬದಲಾವಣೆಗಳು ಉಂಟಾಗುತ್ತವೆ. ಸಾಂಸಾರಿಕ ಸಂಬಂಧದ ಸಮಸ್ತ ಕಟ್ಟುಗಳನ್ನು ಕಗ್ಗಂಟುಗಳನ್ನು ಕತ್ತರಿಸಿ ಹೊರಬರಲು ಅದೊಂದು ಸನ್ಮುಹೂರ್ತವಷ್ಟೇ. ಅವನು ಇಲ್ಲಿಗೆ ಬಂದಂದಿನಿಂದ ನಿಮ್ಮ ಮೇಲೆ ಮುನಿಸಿಕೊಂಡು ಬಂದಿರುವೆನೆಂದೂ ಎಂದೂ ಹೇಳಿಲ್ಲ. ಅಂಥ ಮಹತ್ತರವಾದ ಜ್ಞಾನಶಕ್ತಿ ಸಂಪನ್ನರಿಗೆ ಮುನಿಸೆಂಬುದುಂಟೆ? ಸರ್ವಥಾ ಇಲ್ಲ. ಅವನ ಸತ್ಸಂಕಲ್ಪವನ್ನು ನಡೆಸಿಕೊಡಲು ಈಶ್ವರ ಕಾರುಣ್ಯವೇ ಅವನನ್ನು ಇಲ್ಲಿಗೆ ಎಳೆದು ತಂದಿದೆ ಎಂದು ನಾನು ತಿಳಿದಿದ್ದೇನೆ. ನೀನು ಜನ್ಮಕೊಟ್ಟ ತಾಯಿಯಾಗಿರಬಹುದು. ಅದು ಒಂದು ಜನನನಿಮಿತ್ತವಷ್ಟೇ ಅಲ್ಲದೆ ಅಂಥವರೂ ನಿಮಗೂ ಪೂಜ್ಯರಾಗುತ್ತಾರೆ. ಇನ್ನು ಮೇಲೆ ನೀನು, ಇವನು ನನ್ನ ಮಗನೆಂಬ ಮಮಕಾರವನ್ನು ತೊರೆಯುವುದು ಕ್ಷೇಮ. ಕಲ್ಲಿನಿಂದ ಹುಟ್ಟಿದ ಸ್ವಯಂಭು ಲಿಂಗವು ಆ ಕಲ್ಲಿನ ಮಗುವೆನಿಸದು. ಈ ಕ್ಷೇತ್ರದ ಅಧಿದೇವತೆಗಳು ಅವನನ್ನು ಇಲ್ಲಿಗೆ ಕರೆಸಿಕೊಂಡಿದ್ದಾರೆಂದೇ ನನ್ನ ನಂಬುಗೆ. ಅವನು ಈ ಲೋಕದ ಗುರುವಾಗುವ ಭವ್ಯ ಭವಿಷ್ಯ ಪಡೆದ ಮಹಾವ್ಯಕ್ತಿ. ಅವನು ನಿನಗೂ ಗುರು. ಈ ಭಾವನೆ ನಿಮ್ಮಲ್ಲಿ ಬೆಳೆದು

ಬಂದರೆ ಸಾಕು. ಅವನು ತ್ರಿವಿಧ ದಾಸೋಹಿಯಾಗಿ ವೀರಶೈವ ಧರ್ಮದ ಶ್ರೇಷ್ಠ ಜಂಗಮ ಪರಂಪರೆಯ ವೀರವಿರಕ್ತನಾಗಿ ಲೋಕೋದ್ಧಾರ ಕಾರ್ಯನಿರತನಾಗಿ ಮಹಾ ಮಹಿಮಾಶಾಲಿಯಾಗುವುದನ್ನು ನೀನೇ ಇನ್ನು ಕೆಲದಿನಗಳಲ್ಲಿ ಕಾಣುವಂತಾದೀತು" ಎಂದು ಭವಿಷ್ಯ ನುಡಿದು ಮರುಳಸಿದ್ದಮ್ಮನ ತಾಯ್ತನದ ಹಂಬಲವನ್ನು ಕಡಿಮೆ ಮಾಡಿ ಪ್ರಸಾದವನ್ನಿತ್ತರು. ಆ ಕೂಡಲೆ ಮರುಳ ಸಿದ್ದಮ್ಮನಿಗೆ ಸೀರೆ, ಕುಪ್ಪಸ, ಇತ್ಯಾದಿಗಳನ್ನು ತರಿಸಿ ಮಡಲಿಗೆ ತುಂಬಿ ಕಳಿಸಿಕೊಟ್ಟರು. ಅಳುತ್ತಳುತ್ತಾ ಮರುಳ ಸಿದ್ದಮ್ಮ ಲಕ್ಕೂರಿಗೆ ಬಂದು ನಡೆದ ವೃತ್ತಾಂತವನ್ನೆಲ್ಲ ಹೇಳಿದರು. ಎಲ್ಲರೂ ಕಸಿವಿಸಿ ಗೊಂಡರು. ಬರಬರುತ್ತಾ ರುದ್ರಪ್ಪನ ಮೇಲಿನ ಮಮತೆ ಎಲ್ಲರಿಗೂ ಕಡಿಮೆಯಾಗುತ್ತಾ ಬಂತು. ರುದ್ರಪ್ಪ ಅತ್ಯಂತ ಪ್ರೀತಿಯಿಂದ ಮೇಯಿಸುತ್ತಿದ್ದ ಎರಡು ಮೇಕೆಗಳಿಗೆ ಅವನ ಹೆಸರನ್ನೇ ಸಣ್ಣ ರುದ್ರಪ್ಪ, ದೊಡ್ಡರುದ್ರಪ್ಪ, ಎಂದು ಕರೆದು ಅವು ಸಾಯುವವರೆಗೂ ಪ್ರೀತಿಯಿಂದ ಪೂಜಿಸುತ್ತಾ ನೋಡಿಕೊಂಡರು. ಅವನ್ನು ಸತ್ತ ಮೇಲೆ ಅವನ್ನು ಹುಗಿದು ಅದರ ಮೇಲೆ ಸಮಾಧಿಯನ್ನು ಕಟ್ಟಿಸಿದರೆಂದು ತಿಳಿದು ಬರುವುದು. ಆದರೆ ಈಗ ಆ ಸಮಾಧಿ ಇದೆಯೋ ಇಲ್ಲವೋ ವಿಚಾರಿಸಿ ತಿಳಿಯಬೇಕಾದ ಅಂಶ.

**ರುದ್ರಪ್ಪನ ಭೀಮ ಸಾಹಸದಿಂದ ಸಿದ್ಧಗಂಗೆಗೆ ಸಹಸ್ರ ತೋಳು ಮೂಡಿಬಂದವು :**

ರುದ್ರಪ್ಪ ಅಡಿವಪ್ಪನವರ ಶಿಷ್ಯನಾಗಿ ಶ್ರೀ ಸಿದ್ಧಗಂಗಾ ದಾಸೋಹ ಸಂಸ್ಥೆಯ ಕೆಲಸ ಕಾರ್ಯಗಳ ಮತ್ತು ಪಾಠಶಾಲೆಗಳ ಕೆಲಸ ನೋಡಿಕೊಂಡು ಶ್ರೀ ಕ್ಷೇತ್ರದ ಇಂದಿನ ಕೀರ್ತಿಯ ಕಲ್ಪವೃಕ್ಷಕ್ಕೆ ತನ್ನ ಅದ್ಭುತ ಸಾಮರ್ಥ್ಯದ ಕ್ರಿಯಾಮುಖದ, ಶಿವ ಯೋಗದ ಕರ್ತೃತ್ವಶಕ್ತಿಯ ದೇವಗಂಗೆಯನ್ನೇ ಹರಿಸಿ ಮಹಾವಿಟಪಿಯನ್ನಾಗಿಸುವ ಭಾರವನ್ನು ಮಾನಸಿಕವಾಗಿಯೇ ಹೆಗಲ ಮೇಲೆ ಹೊತ್ತು ಕರ್ತವ್ಯಶೀಲರಾದರು. ಸಿದ್ಧಗಂಗೆಯ ಭಾಗ್ಯದಬಾಗಿಲು ತೆರೆಯಿತು. ಅದರ ಲೋಕೋತ್ತರ ಕ್ರಿಯಾ ಬಾಹುಳ್ಯಕ್ಕೆ ಏಕಕಾಲದಲ್ಲಿ ಸಹಸ್ರ ಭಾಹುಗಳೇ ಮೂಡಿಬಂದಹಾಗಾಯಿತು. ಅವರು ಸಿದ್ಧಗಂಗಾ ಕ್ಷೇತ್ರಕ್ಕೊಂದು ದೊಡ್ಡ ಶಕ್ತಿಯಾಗಿ ಪರಿಣಮಿಸಿದರು. ಅನೇಕ ಅದ್ಭುತ ಘಟನೆಗಳು ಶ್ರೀ ಕ್ಷೇತ್ರದಲ್ಲಿ ಇವರಿಂದ ಜರುಗಿದುದು ಅಡವೀಸ್ವಾಮಿ ಗಳವರ ಗಮನಕ್ಕೆ ಬಂದಿತು. ಶ್ರದ್ಧಾಭಕ್ತಿವಿಶ್ವಾಸಗಳಿಂದ ಅಡವೀಸ್ವಾಮಿಗಳವರ ಸೇವಾ ಕೈಂಕರ್ಯದಲ್ಲಿ ರುದ್ರಪ್ಪ ತನ್ನನ್ನೇ ಕರಗಿಸಿಕೊಂಡಿದ್ದನು. ಒಂದು ದಿನ ಅಟವೀಸ್ವಾಮಿಗಳವರ ಎದು ರಿನಲ್ಲಿಯೇ ಅದ್ಭುತವಾದ ಒಂದು ಘಟನೆ ನಡೆಯಿತು. ಅದು ಹೀಗೆ:

ಹಾಸನ ಜಿಲ್ಲಾ ತೋಟದಗದ್ದೆ ಎಸ್ಟೇಟಿನ ಕಾಫಿಪ್ಲಾಂಟರ್ ಶ್ರೀ ದೇವಪ್ಪಗೌಡರಿಗೆ ಭೂತಚೇಷ್ಟೆಯುಂಟಾಯಿತಂತೆ, ನನ್ನ ಗುರುವು ಸಿದ್ಧಗಂಗೆಯಲ್ಲಿದ್ದಾನೆಂದು ಹೇಳಿದ ಹೇಳಿಕೆಯಂತೆ ಗುರುವನ್ನು ತೋರಿಸಲು ಅವರ ಬಂಧುಗಳು ಆ ಭೂತಚೇಷ್ಟೆಯ

ನಿವಾರಣೆಗೆ ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಅವರನ್ನು ಕರೆತಂದರಂತೆ. ಶ್ರೀಕ್ಷೇತ್ರಕ್ಕೆ ಬಂದೊಡನೆಯೇ ಗೌಡರು ನನ್ನ ಗುರುವೆಲ್ಲಿ ? ಎಂದು ಆರ್ಭಟಿಸುತ್ತಿರಲು ಇಗೋ ನಿನ್ನ ಗುರುವನ್ನು ನೋಡೆಂದು ಅಟವೀಶ್ವರರ ಎದುರಿಗೆ ಒಯ್ದು ನಿಲ್ಲಿಸಿದರಂತೆ. ಆಗ ಗೌಡರು 'ಇವನಲ್ಲ ನನ್ನ ಗುರು' ಎನ್ನುತ್ತ ತಿರುಗು ಮುರುಗಾಗಿ ನಿಂತರಂತೆ. ಈ ಘಟನೆ ಅಡವೀಸ್ವಾಮಿಗಳಿಗೂ ಅಚ್ಚರಿಯ ಮೇಲೆ ಅಚ್ಚರಿಯನ್ನುಂಟು ಮಾಡಿತು. ಅಷ್ಟರಲ್ಲಿ ರುದ್ರಪ್ಪನವರು ಸೌದೆ ಗಾಡಿಯನ್ನು ಹೊಡೆದುಕೊಂಡು ಬರುತ್ತಿದ್ದುದು, ಗೌಡರ ಕಣ್ಣಿಗೆ ಬಿತ್ತು. ತಕ್ಷಣವೇ ಕುಪ್ಪಳಿಸುತ್ತ ಆರ್ಭಟಿಸುತ್ತ "ಅಗೋ ನನ್ನ ಗುರು ಪರಮಾರಾಧ್ಯ ಗುರು" ಎಂದು ಹೇಳುತ್ತ ಗಾಡಿಯ ಮೇಲಿದ್ದ ರುದ್ರಪ್ಪನವರ ಪಾದಗಳನ್ನು ಗಟ್ಟಿಯಾಗಿ ಹಿಡಿದುಕೊಂಡುಬಿಟ್ಟರು. "ಗುರುವೇ, ಪರಮ ಗುರುವೇ, ತ್ರಾಹಿಮಾಂ, ತ್ರಾಹಿಮಾಂ" ಎಂದು ಅಂಗಲಾಚಿ ಬೇಡಿಕೊಳ್ಳತೊಡಗಿದರು. ನೆರೆದ ಜನಸ್ತೋಮ ಸ್ತಂಭೀಭೂತವಾಯಿತು. ಅಟವೀ ಸ್ವಾಮಿಗಳು ಈ ಘಟನೆಯಿಂದ ಹೌಹಾರಿದರು. ಆ ಗಳಿಗೆಯಲ್ಲಿಯೇ ಲಕ್ಕೂರಿನ ರುದ್ರಪ್ಪ ಉದ್ದಾನ ಶಿವಯೋಗಿಯಾಗಿ ಮಾನಸಿಕ ಪರಿವರ್ತನೆ ಹೊಂದಿದರು. ಯಾವುದೋ ಅಪೂರ್ವ ಸಂಸ್ಮರಣೆಗೊಳಗಾದರು[12]. ಆಗ ಗೌಡರು— "ನಾವಿಬ್ಬರೂ ಇಲ್ಲಿ ಕಾಣುವ ರಾಮಲಿಂಗನ ಬೆಟ್ಟದಲ್ಲಿರುವ ದೊಡ್ಡ ಸಿದ್ಧಪ್ಪನ ಗವಿಯಲ್ಲಿದ್ದ ತಪಸ್ವಿಗಳಲ್ಲವೆ ? ಒಮ್ಮೆ ಸಿದ್ಧಲಿಂಗೇಶ್ವರರ ದರ್ಶನಕ್ಕೆ ಬಂದಾಗ ಅಮ್ಮನವರು (ಗಂಗಾಮಾತೆಯರು) ದರ್ಶನವಿತ್ತರು. ಆಗ ನಾನೆಸಗಿದ ಒಂದು ತಪ್ಪಿಗಾಗಿ ನನ್ನನ್ನು ರಾಕ್ಷಸನಾಗೆಂದು ಅಮ್ಮನವರು ಶಾಪವೀಯಲಿಲ್ಲವೇ ? ಆಗ ಶಾಪಗ್ರಸ್ತನಾದ ನಾನು ಸಿದ್ಧಲಿಂಗೇಶನ ಮರೆ ಹೋಗಲು 'ಶಾಪದ ಫಲವನ್ನನುಭವಿಸಿಯೇ ತೀರಬೇಕೆಂದು' ಅಪ್ಪಣೆ ಮಾಡಿದರಲ್ಲವೇ ? 'ಶಾಪದ ಶೀಘ್ರ ನಿವಾರಣೋಪಾಯ ಕೇಳೆನ್ನಲು 'ನಿನ್ನೊಡನೆ ನಾನು ಇರಬೇಕು', ಎಂದು ಕೇಳಲಿಲ್ಲವೇ ? ಬ್ರಹ್ಮಚಾರಿಯಾದ ನೀನು ಸಮ್ಮತಿಸಲಿಲ್ಲವೆ ?'

'ನೀನು ಮನುಷ್ಯ ರೂಪದಿಂದ ಈ ಕ್ಷೇತ್ರವನ್ನು ಉದ್ಧರಿಸಿ ಮಹಾದಾನಿ (ಉದ್‌ದಾನಿ) ಯಾಗು ; ಮಹಾಪುರುಷನಾಗು' ಎಂದು ಸಿದ್ಧಲಿಂಗೇಶ್ವರರು ಹೇಳಲು ನೀನು ಒಪ್ಪಲಿಲ್ಲವೇ ? ಗುರುವೆ....' ಇತ್ಯಾದಿಯಾಗಿ ಎಲ್ಲರೂ ಕೇಳುವಂತೆ ತಮ್ಮ ಕಂಚಿನ ಕಂಠದಿಂದ ನುಡಿದೊಡನೆಯೇ ರುದ್ರಪ್ಪ ತನ್ನನ್ನೇ ತಾನು ಮರೆತು ಸ್ತಂಭೀಭೂತ

---

12 ಈ ಘಟನೆಯನ್ನು ಡಾ॥ ಜಿ. ಮರುಳಸಿದ್ದಯ್ಯ, ಸಂಸ್ಕೃತ ಪ್ರೊಫೆಸರ್, ಮಾನಸ ಗಂಗೋತ್ರಿ ಮೈಸೂರು ಅವರು 'ಪ್ರಸಾದ' ಗ್ರಂಥದಲ್ಲಿ ಪ್ರಕಟಿಸಿದ್ದಾರೆ. ಶ್ರೀಕ್ಷೇತ್ರದಲ್ಲಿ ಕಲಿತ ವಿದ್ಯಾರ್ಥಿಯಾದ ಇವರು ಉದ್ದಾನಶಿವಯೋಗಿಗಳ ಕೃಪೆಗೆ ಪಾತ್ರರಾದ ವಿದ್ಯಾರ್ಥಿಗಳಲ್ಲಿ ಒಬ್ಬರು. ಆ ಕಾಲದಲ್ಲಿ ನಡೆದ ಘಟನೆಗಳ ಬಗೆಗೆ ತಿಳಿದವರಲ್ಲಿ ಇವರೂ ಒಬ್ಬರು. ಇವರು ಈ ಘಟನೆಗಳನ್ನು ಪ್ರತ್ಯಕ್ಷವಾಗಿ ಕಂಡವರು.



ರಾಮಲಿಂಗೇಶ್ವರ ಬೆಟ್ಟದ ದೊಡ್ಡ ಸಿದ್ಧಪ್ಪನ ಗವಿಯ ದೂರದ ನೋಟ



ದೊಡ್ಡಸಿದ್ದಪ್ಪನ ಗವಿಯ ದುರ್ಗವು ಪ್ರವೇಶದ್ವಾರ

ನಾದನು. ಸ್ವಲ್ಪ ಸಮಯದ ನಂತರ ಬಿಕ್ಕಿಬಿಕ್ಕಿ ಅಳತೊಡಗಿದನು. ಗೌಡರೂ ಅಳತೊಡಗಿದರು. ಮರುಕ್ಷಣದಲ್ಲಿ ಒಬ್ಬರಿಗೊಬ್ಬರು ಅಪ್ಪಿಕೊಂಡು ಕ್ಷಣಕಾಲ ಅತ್ತು ದುಃಖೋಪಶಮನಗೊಂಡ ನಂತರ ಅಟವೀ ಸ್ವಾಮಿಗಳವರಿಗೆ ನಮಸ್ಕರಿಸಿದರು ದೇವಪ್ಪಗೌಡರ ಪೈಶಾಚಿಕ ಭಾವ ತೊಲಗಿತು. ಈ ಘಟನೆಯೇ ಅಟವೀಸ್ವಾಮಿಗಳವರ ಮೇಲೆ ಮಹತ್ತರ ಪರಿಣಾಮ ಬೀರಿತು. ಇದುವರೆಗೂ ರುದ್ರಪ್ಪನಿಂದ ನಾನು ಸೇವೆ ಮಾಡಿಸಿಕೊಂಡದು ತಪ್ಪೆಂಬ ಭಾವ ಬಲಿಯಿತು ಈತ ರುದ್ರಪ್ಪನಲ್ಲ. ಈ ಕ್ಷೇತ್ರಾಧಿಪತಿಯಾದ ಸಿದ್ಧಲಿಂಗೇಶ್ವರನ ಕೃಪಾವಿಶೇಷಕ್ಕೆ ಪಾತ್ರನಾದ ಅದ್ಭುತ ಶಕ್ತಿಯ ಶಿವಯೋಗಿ. ಇನ್ನು ಮುಂದೆ ನಾನು ಇವನ ಸೇವೆಯನ್ನು ಸ್ವೀಕರಿಸಬಾರದು. ಈತನೇ ಈ ಕ್ಷೇತ್ರಾಧ್ಯಕ್ಷನೆಂಬ ತೀರ್ಮಾನಕ್ಕೆ ಬಂದರು.[13] ಲಕ್ಷ್ಕ್ಕದು ರುದ್ರಪ್ಪ ಮತ್ತು ದೇವಪ್ಪಗೌಡರಿಬ್ಬರೂ ಗೌಪ್ಯವಾಗಿ ಶಿವಗಂಗಾಕ್ಷೇತ್ರ, ಸಿದ್ಧಗಿರಿ (ಸಿಜಗಲ್ಲುಬೆಟ್ಟ), ರಾಮಲಿಂಗನಬೆಟ್ಟ, (ರಾಮಗಿರಿ, ಕೋಟಗೆರೆ ಸಮೀಪದಲ್ಲಿರುವ ಸಿದ್ಧನಬೆಟ್ಟ[14]) ಗಳಲ್ಲಿ ಸಂಚರಿಸಿಬಂದರು. ತಮ್ಮ ಪೂರ್ವ ಜೀವನದ ಗೌಪ್ಯ ಸ್ಥಾನಗಳನ್ನೆಲ್ಲ ನೋಡಿಕೊಂಡು ಬಂದರು. ಜೀವಿತಾವಧಿಯವರೆಗೆ ಇವರೀರ್ವರೂ ಪರಸ್ಪರಾವಲಂಬಿಗಳಾಗಿಯೇ ಬಾಳಿದುದನ್ನು ಎಲ್ಲರೂ ಕಂಡಿದ್ದಾರೆ. ಇಂದಿಗೂ ದೇವಪ್ಪಗೌಡರ ಮಕ್ಕಳು ಮೊಮ್ಮಕ್ಕಳು ಮನೆಮಂಡಳಿಯೆಲ್ಲ ಶ್ರೀ ಕ್ಷೇತ್ರದ ಶ್ರದ್ಧಾಭಕ್ತಿ, ವಿಶ್ವಾಸಪೂರ್ಣ ಭಕ್ತ ವರ್ಗದವರೇ ಆಗಿ ನಡೆದುಕೊಳ್ಳುತ್ತಿದ್ದಾರೆ. ಈಗಿನ ಶ್ರೀ ಕ್ಷೇತ್ರದ ಶ್ರೀ ಶಿವಕುಮಾರ ಸ್ವಾಮಿಗಳವರೂ ಈ ಮನೆತನದಲ್ಲಿ ಅಷ್ಟೇ ವಾತ್ಸಲ್ಯವಿಟ್ಟುಕೊಂಡಿರುವುದಕ್ಕೆ ಈ ಹಿಂದೆ ಹೇಳಿದ ದೇವಪ್ಪಗೌಡರ ಮತ್ತು ಉದ್ದಾನ ಶಿವಯೋಗಿಗಳ ಪರಸ್ಪರ ಅವಲಂಬನತ್ವವೇ ಪ್ರಮುಖ ಕಾರಣವೆನ್ನಬಹುದು.

( ಮುಂದುವರಿಯುವುದು )

---

13 ಉದ್ದಾನ ಶಿವಯೋಗಿಗಳವರು ತಾವು ಪೂರ್ವಾಶ್ರಮದ 'ರುದ್ರಪ್ಪ' ಎಂಬ ಹೆಸರಿನಿಂದ ಶ್ರೀಕ್ಷೇತ್ರದ ಸೇವಾಕೈಂಕರ್ಯದಲ್ಲಿದ್ದಾಗಲೂ, ಶಿವಯೋಗಿಗಳಾದ ಮೇಲೂ ಅನೇಕ ಪವಾಡಗಳನ್ನು ಮೆರೆದ ಬಗೆಬಗೆ ಜನಜನಿತವಾದ ಕಥೆಗಳೆಷ್ಟೋ ಇವೆ. ಅವುಗಳಲ್ಲಿ ಕೆಲವನ್ನು ಮುಂದೆ ವಿವರಿಸಲಾಗಿದೆ.

14 ಈ ಬೆಟ್ಟವು ಹರದನಹಳ್ಳಿ ನಿರಂಜನ ಜಗದ್ಗುರು ಪರಂಪರೆಯವರ ಸಂಬಂಧದ ಪುಣ್ಯಕ್ಷೇತ್ರ. ಇಲ್ಲಿ ಗೊಸಲ ಸಿದ್ಧೇಶ್ವರರ ಶಿಷ್ಯರೂ, ವಿಜಯನಗರದ 101 ವಿರಕ್ತರ ಸಂಪ್ರದಾಯದ ಬೆಳವಣಿಗೆಗೆ ಕಾರಣಕರ್ತರೂ ಎನಿಸಿದ ಶಂಕರಾಚಾರ್ಯ (ಶಂಕರಪ್ರಭು) ಸ್ವಾಮಿಗಳವರ ಗದ್ದುಗೆ ಇದೆ. ( ನಿರಂಜನ ವಂಶರತ್ನಾಕರದ ಅಭಿಪ್ರಾಯದ ಪ್ರಕಾರ. )



ಕಾವ್ಯವಾಹಿನಿ

## ಬಾಳ ಭಾಗ್ಯ

—ವಿ. ಸೀ.

ತಾಯ ಬಸಿರಿಂದ ಬಂದೆವು-ಬತ್ತಲು.
ಹೋಗುವುದು ನಾಳೆ ಹಾಗೇ; ಒಂದಿಷ್ಟು ಸೌದೆ, ಬೆಂಕಿ,
ಇಲ್ಲವೇ ವಿದ್ಯುತ್ ಪ್ರಭಾವದಲಿ ಯಾರಿಗೂ ಕಾಣಿಸದ-ಬೂದಿ.
ಹುಗಿದರೊ ನೆಲವಗೆದು: ಮಣ್ಣೆರಚು; ಕಲ್ಲಹಾಸು:
(ಒರಲೆ ತಿನ್ನಲಿಯೆಂದು)

ಕೊಂಡೇನು ತಂದದ್ದು ? ಏನನೊಯ್ದೇವು ಒಡನೆ ?
ನೆನಪು ನಮ್ಮದು ನಾಲ್ವರಿಗೆ ಸರಿ, ಸವಿ ಕಂಡರಾಯ್ತು.
ತಾಯ್ತಂದೆ ಇತ್ತದ್ದು ಎಲುಗೂಡು;-ಎರಡು ಮನೆ ಜೇಗು.
ಹ ಬಲವೊ ರುಗ್ಣತೆಯೊ ಹೇಳಬೇಕಾರು ?
ನಾವೇನು ಸೇರಿಸಿದೆವೊ ಅದು ಮಾತ್ರ ನಾವು—
ಹಣ್ಣಾಗಿ ತಿನಿಸಾದರಾರ್ಗನ್ನ ಅದು ನಮ್ಮ ಕೊಡುಗೆ;
ಬಿಟ್ಟು ಹೋಗುವುದು ನಮ್ಮ ಕೆಡಕು-ಒಳಿತು.
ಯಾರಿಗೇನಾಯ್ತೊ ನಮ್ಮಿಂದ-ನೋವೊ ನಲಿವೊ
ನೆರವೊ ನಷ್ಟವೊ ಕಷ್ಟವೊ ಅರಿತರಾಗಿತ್ತು.
ಇನ್ನಷ್ಟು ಒಳಿತಾಗಿ ನಡೆದಿದ್ದರಾಗಿತ್ತು
ಎನಿಸುವುದು ಹಲವು ಬಾರಿ: ಈಗದುದನೆಣಿಸಿ.
ನಾವಾಡಿದುದು ಮಾಡಿದುದು ಯಾರಿಗೇನಾಯ್ತೊ
ಯತ್ನವಿಲ್ಲದೆಯೆ, ಕೈಮೀರಿ, ಕ್ಷಣಗುಪ್ತಿಗಾಗಿ.
ಉಟ್ಟದ್ದು ತೊಟ್ಟದ್ದು ಕೊಟ್ಟದ್ದು ಇಲ್ಲದ್ದು
ಇಲ್ಲವೆಂದದ್ದು, ಗೊಣಗಿ ದಾಕ್ಷಿಣ್ಯಕ್ಕೆ ಸಿಕ್ಕಿದ್ದು-
ಯಾವುದರ ಬೆಲೆ ಫಲಿಸಿತ್ತು ಹೇಗೊ.
ಕೊಂಡದಾನಕ್ಕಂತು, ಇತಿಯಿಲ್ಲ, ಮಿತಿಯಿಲ್ಲ; ಲೋಕ
ನಿತ್ತದ್ದು ಅಪರಂಪಾರ. ನೆನಸೆ ಅಳುಕುವುದು ಮನಸು.
ನಾವಿತ್ತ ಅಲ್ಪಕ್ಕೆ ನಮ್ಮೆಡೆಗೆ ಬಂದದ್ದು ಲಕ್ಷ
ಪತ್ತು ಹುಟ್ಟಿಗೆ ಸಂದು ಸಾಕಾಗುವಷ್ಟು.
ಆ ನೆನಪು ಸಕಲ ಸಾಫಲ್ಯ
ನುಡಿದು ಕೈಮುಗಿವೆವು.
ಅದುವೆ ಕಾಪಾಗಿ ಬಾಳ ಸಂಪತ್ತು
ನೆಮ್ಮದಿಯನೂಡುತಿರಲಿ.

ಲೇಖಾಂಕ-೧

# "ವಿಜಯನಗರ ಸ್ಥಾಪನೆಯಲ್ಲಿ ಲಿಂಗಧರ್ಮದ ಪಾತ್ರ"

**—ವೇದ ವೇದಾಂತ ವಿದ್ಯಾವಾಚಸ್ಪತಿ ಶ್ರೀ ಟಿ. ಎನ್. ಮಲ್ಲಪ್ಪ**

ಐತಿಹಾಸಿಕ ವಿಷಯಗಳಲ್ಲಿ ಪ್ರಸಿದ್ಧ ಅನ್ವೇಷಕ ಪ್ರೊ॥ ಕೆ. ಎ. ನೀಲಕಂಠಶಾಸ್ತ್ರಿಗಳು ಮತ್ತೆ ಮತ್ತೆ ಎಂದರೆ ಅವರು ದಕ್ಷಿಣ ದೇಶದ ಚರಿತ್ರೆಯ ವಿಷಯದಲ್ಲಿ ಬರೆದಿರುವ ಎರಡು ಗ್ರಂಥಗಳಲ್ಲಿಯೂ-ಲಿಂಗವಂತರ ಎರಡು ಗುಂಪಿನವರೂ ತಮ್ಮ ತಮ್ಮೊಳಗಿನ ಬಿನ್ನಾಭಿಪ್ರಾಯಗಳನ್ನು ಮರೆತು, ತುರುಷ್ಕರ ಉಪಟಳವನ್ನು ಎದುರಿಸಲು ಮುಂದಾಗಿ, ಹಿಂದೂ ಧರ್ಮೋದ್ಧಾರಕ್ಕಾಗಿ ವಿಜಯನಗರ ರಾಜ್ಯ ಸ್ಥಾಪನೆಯಲ್ಲಿ ಪಾತ್ರವಹಿಸಿದರೆಂದು ಬರೆದಿರುವುದು ಈ ವಿಷಯದಲ್ಲಿ ಹೆಚ್ಚು ಅನ್ವೇಷಣೆಯನ್ನು ಮಾಡಲು ಕಾರಣವಾಯಿತು. ಶೈವಧರ್ಮವು ಪ್ರಪಂಚದ ಧರ್ಮಗಳಲ್ಲೆಲ್ಲಾ ಅತ್ಯಂತ ಪ್ರಾಚೀನವಾದ ಧರ್ಮವೆಂದೂ ಶಿಲಾಯುಗದಲ್ಲೇ ಅದು ಪ್ರಚಾರದಲ್ಲಿದ್ದಿತೆಂದೂ ಇಂದಿನ ಅನೇಕ ಆಚರಣೆಗಳು ವೇದಪೂರ್ವ ಸೈಂಧವನಾಗರೀಕರ ಕಾಲದಲ್ಲಿಯೇ ಆಚರಣೆಯಲ್ಲಿದ್ದವೆಂದೂ ಪಶು ಪಕ್ಷಿಗಳನ್ನು ಲಿಂಗರೂಪದಲ್ಲಿ ಪೂಜಿಸುವುದೂ ಈಗಿನ ಶಿವಭಕ್ತರಂತೆ ಅದನ್ನು ಧರಿಸುವುದೂ ವೃಷಭ ಪೂಜೆಯೂ ಶಿವಯೋಗವೂ ಪ್ರಚಾರದಲ್ಲಿದ್ದವೆಂದೂ ಆ ನಾಗರೀಕತೆಯ ಅನ್ವೇಷಕರಾದ ಸರ್ ಜಾನ್ ಮಾರ್ಷೆಲ್ಲರ ವರದಿಯಿಂದ ತಿಳಿದು ಬರುತ್ತದೆ. ಆರ್ಯರ ಯಜ್ಞಗಳನ್ನು ವಿರೋಧಿಸುತ್ತಿದ್ದ ಈ ಜನರ ಧರ್ಮಕ್ಕೆ ಬಂದ ಬಾಲಾರಿಷ್ಟವನ್ನು ಎದುರಿಸಿ ಈ ಧರ್ಮವು ಅಥರ್ವವೇದದ ಹೊತ್ತಿಗೆ ಪ್ರಬಲವಾಯಿತು. ಅನಂತರ ಲಿಂಗರಹಿತರಿಗೆ ಮೋಕ್ಷವಿಲ್ಲವೆಂದು ಶಿರೋವ್ರತರಿಗೆ ಉಪದೇಶಿಸುವ ಮುಂಡಕ, "ಸತ್ಯಂ-ಶಿವಂ-ಸುಂದರಂ" ಎನ್ನುವ ಮಾಂಡುಕ್ಯ, ಅತ್ಯಾಶ್ರಮಿಗಳಿಗೆ ಉಕ್ತವಾದ ಶ್ವೇತಾಶ್ವತರ ಉಪನಿಷತ್ತುಗಳ ಮತ್ತು ಶಿವಾಗಮಗಳ ಕಾಲದಲ್ಲಿ ಲಿಂಗಧಾರಣ ಧರ್ಮವು ಪಾಶುಪತ, ಶಿರೋವ್ರತ, ಅತ್ಯಾಶ್ರಮ ಇತ್ಯಾದಿ ಹೆಸರುಗಳಿಂದ ಪ್ರಸಿದ್ಧವಾಗಿ ಇದ್ದಿತು. ಕಾಲಕ್ರಮದಲ್ಲಿ ಆರ್ಯರ ವೈದಿಕ ಧರ್ಮವು ದ್ರಾವಿಡರ ಆಗಮಿಕ ಧರ್ಮವೂ ಒಂದಾಗಿ ಹೋಗಿ ದ್ರಾವಿಡ ಧರ್ಮದ ಶಿವನೂ, ಇಂದ್ರನ ಪತನವಾಗಲು ಇಂದ್ರಾನುಜನಾದ ವಿಷ್ಣುವೂ ಆಗಮಿಕ ಧರ್ಮಾನುಸಾರವಾಗಿ ಸ್ಥಾಪಿತವಾದ ಗುಡಿಗಳಲ್ಲಿ ವೇದಮಂತ್ರಗಳಿಂದ ಪೂಜಿತರಾಗುವ ಕಾಲ ಬಂದಿತು. ಶೈವವು ವೈದಿಕವಾದ ಭರದಲ್ಲಿ ಶೈವರು ವರ್ಣಾಶ್ರಮ ಧರ್ಮಾನುಯಾಯಿಗಳಾಗಿ ಯಜ್ಞಯಾಗಾದಿಗಳನ್ನು ಮಾಡುವವರಾದರು. ಕ್ರಿ. ಶ. ಎರಡನೆಯ ಶತಮಾನದ ಕಾಲದಿಂದ ಆಳಿದ ಭಾರಶಿವರ ಶಾಸನದಲ್ಲಿ **"ಶಿವಲಿಂಗೋದ್ವಹನ ಶಿವ ಸುಪ್ರತಿಷ್ಠ ಸಮುತ್ಪಾದಿತ ರಾಜ್ಯವಂಶ"**

ದವರೆಂದು ಹೇಳಿಕೊಂಡಿರುವುದರಿಂದ ಭಾರಶೈವರು ಲಿಂಗಧಾರಿಗಳಾದರೂ "**ದಶಾಶ್ವ ಮೇಧಾವಭೃತ ಸ್ನಾನಾನಾಂ ಭಾರಶಿವನಾಂ**" ಎಂದು ಹೇಳಿಕೊಂಡಿರುವುದರಿಂದ ಯಜ್ಞಯಾಗಾದಿಗಳನ್ನು ಮಾಡುವವರಾಗಿದ್ದರು. ಕಾಲಕ್ರಮದಲ್ಲಿ ಹಿಂಸಾತ್ಮಕ ಯಜ್ಞ ಯಾಗಾದಿಗಳು ಜನಾನುರಾಗವನ್ನು ಕಳೆದುಕೊಂಡವಾದರೂ ಪಾಶುಪತ ಮಾಹೇಶ್ವರ ಧರ್ಮದವರು ವರ್ಣಾಶ್ರಮ ಧರ್ಮಾನುಯಾಯಿಗಳಾಗಿಯೇ ಮುಂದುವರೆದರು. ಈ ಮಾಹೇಶ್ವರ ಧರ್ಮದಲ್ಲಿನ ಕಾಪಾಲಿಕ ಪಾಶುಪತ ಶಾಖೆಗಳಲ್ಲಿ ಶಾಕ್ತ ಧರ್ಮವು ಹೆಚ್ಚು, ಕಾಲಕ್ರಮದಲ್ಲಿ ಅವು ಅಳಿದುಹೋದವು. ಕಾಳಾಮುಖ ಮಾಹೇಶ್ವರರು ಶೈವ ಮಾಹೇಶ್ವರರಿಗಿಂತ ಪ್ರಬಲರಾಗಿ ರಾಜಮಹಾರಾಜರ ರಾಜಗುರುಗಳಾಗಿ ೧೨ನೆಯ ಶತಮಾನದವರೆಗೂ ವೈದಿಕ ಧರ್ಮವನ್ನು ಪ್ರಬಲಗೊಳಿಸಿದುದು ಶಾಸನೋಕ್ತ ಪ್ರಸಿದ್ಧ ವಿಷಯವಾಗಿದೆ. ಶೈವ ಮಾಹೇಶ್ವರರಲ್ಲಿ ಕಾಳಾಮುಖ ಮಾಹೇಶ್ವರರಲ್ಲಿದ್ದ ಶಕ್ತಸಂಪ್ರದಾಯದ ಲೇಶವು ಇರಲಿಲ್ಲವಾಗಿ ಇವರು ಶುದ್ಧ ಶೈವರೆಂದೂ ಶುದ್ಧ ವೈದಿಕ ಶೈವರೆಂದೂ ಕರೆದು ಕೊಳ್ಳಲು ಪ್ರಾರಂಭಿಸಿದರು. ಗೋಳಕೀಮಠ ಸಂಪ್ರದಾಯದ ಈ ಶುದ್ಧ ಶೈವ ಗುರುಗಳು ಹತ್ತನೆ ಶತಮಾತದಿಂದ ಹದಿನಾಲ್ಕನೇ ಶತಮಾನದವರೆಗೆ ದಕ್ಷಿಣ ದೇಶದಲ್ಲೆಲ್ಲಾ ಹರಡಿ ರಾಜಗುರುಗಳಾಗಿ ರಾರಾಜಿಸಿದುದು ಮಲ್ಕಾಪುರ ಶಾಸನಾದಿಗಳಿಂದ ತಿಳಿದುಬರುತ್ತದೆ. ಹತ್ತನೆಯ ಶತಮಾನದ ಜೈನ ಹರಿಭದ್ರ ಸೂರಿಯು ಮಾಹೇಶ್ವರರನ್ನು ಕುರಿತು "**ಜಟಾದೌ ಪ್ರಾಣ ಲಿಂಗಧರಾಃ**" ಎಂದು ಹೇಳಿರುವನಾದರೂ "**ಪಂಚಾಗ್ನಿಸಾಧನಪರಾಃ**" ಎಂದೂ ಹೇಳಿರುವುದರಿಂದ ಇವರು ಲಿಂಗವನ್ನು ಧರಿಸಿದ ಬ್ರಾಹ್ಮಣರು. ರಾಜಗುರುಗಳಾದ ಇವರನ್ನು ನೋಡಿ ಪಂಪನ ಆದಿಪುರಾಣದಲ್ಲಿ "**ಕುಲಿಂಗಿಗಳಂ ಜಗಂ ಸೇವಿಸುಗಂ**" ಎಂದೂ, ಇದಕ್ಕೂ ಹಿಂದಿನ ಆದಿಪುರಾಣದಲ್ಲಿ "**ಪೊಲ್ಲಲಿಂಗಿಗಳರಸರ್ಕಳಿಂ ಪೂಜಿಸೆಪಡುವರ್**" ಎಂದೂ ಅಸಹನೆಯಿಂದ ಹೇಳಿದೆ. ಶಂಕರ ವಿಜಯಗಳನ್ನು ಬರೆದ ಕಾಲದಲ್ಲಿಯೂ ಪಾಶುಪತ ಮತ್ತು ಜಂಗಮ ಮಾಹೇಶ್ವರ ಶಾಖೆಗಳ ವಿಷಯದಲ್ಲಿ ಹೀಗೆ ಹೇಳಿದೆ.—"ಸಿರಸಿ ಪಾಷಾಣ ಲಿಂಗಂಚ ಧಾರಿಣಃ ಜಂಗಮಾಃ। ಲಾಲಟೇ ಭುಜದ್ವಯೇ ಹೃನ್ನಾಭಿಷು ಲಿಂಗಧಾರಿಣಃ ಪಾಶುಪತಾಃ ॥ ಇವರೇ ಮೊದಲಾದ ಷಡ್ವಿಧಶೈವರನ್ನು ಶಂಕರಾಚಾರ್ಯರು ಜಯಿಸಿದರಂತೆ. ಒಟ್ಟಿನಲ್ಲಿ ಹೇಳುವುದಾದರೆ ದೇವದೇವಿಯರ ಅನೇಕ ವಿಗ್ರಹಗಳ ತಲೆಯ ಮೇಲಿರುವಂತೆ, ಉತ್ತಮ ವರ್ಣದವರಾದ ಬ್ರಾಹ್ಮಣರಲ್ಲೇ ಲಿಂಗಧಾರಣ ಪದ್ಧತಿ ಇತ್ತು. ವೇದವೇದಾಂಗಾದಿ ವಿದ್ಯಾ ಕೇಂದ್ರಾಧಿಪತಿಗಳೂ ತಪಸ್ವಿಗಳೂ ರಾಜಗುರುಗಳೂ ಆಗಿ ಅನೇಕ ಶತಮಾನಗಳವರೆಗೆ ಹಿಂದೂ ಧರ್ಮೋದ್ಧಾರ ಮಾಡಿದ ಪಾಶುಪತ ಶೈವಲಿಂಗಿ ಮಾಹೇಶ್ವರರ ಉಚ್ಛ್ರಾಯ ಕಾಲದಲ್ಲಿ ಅವರ ಹೊಟ್ಟೆಯಲ್ಲಿ ಹುಟ್ಟಿದರು ಭಕ್ತಿಭಂಡಾರಿ ಬಸವೇಶ್ವರರು. ಅತ್ಯುತ್ತಮವಾದ ಸಂಪ್ರದಾಯಗಳೊಡನೆ ಯಜ್ಞಯಾಗಾದಿ ಹಿಂಸಾತ್ಮಕ ಕರ್ಮಗಳೂ ಅತಿ ಮಾರ್ಗಿಕ ದುರಾಚಾರ

ಗಳೂ ಸೇರಿಕೊಂಡಿದ್ದ ಪಾಶುಪತ ಶೈವಕ್ಷೇತ್ರದಲ್ಲಿ ಈ ದೋಷಗಳೆಂಬ ಕಳೆಗಳನ್ನು ಕಿತ್ತೊಗೆದು ಸದ್ಗುಣಗಳೆಂಬ ಬೆಳೆಗಳನ್ನುಳಿಸಿ ಬೆಳೆಸಿ ಪೋಷಿಸಿದುದು ಬಸವೇಶ್ವರರ ಮಹತ್ಕಾರ್ಯವಾಗಿದೆ.

ಲಿಂಗಧಾರಣ ಧರ್ಮವು ಬಸವೇಶ್ವರರಿಂದಲೇ ಪ್ರಾರಂಭವಾಯಿತೆಂದು ವೀರಶೈವರು ತಿಳಿದಿದ್ದ ಕಾಲವೊಂದಿತ್ತು. ವೀರಶೈವರಲ್ಲೇ ಕೆಲವರು ಹಾಗೆ ಹೇಳುತ್ತಿರುವುದರಿಂದ ಇದು ನಿರ್ಧರಿಸಬೇಕಾದ ವಿಷಯವಾಗಿದೆ. ಬಸವರಾಜದೇವರ ರಗಳೆಯಲ್ಲಿ ಬಸವನ ತಂದೆ 'ಕಮ್ಮೆ ಕುಲದಿಂದ ಮೆರೆದಿರ್ಪ ವಿಪ್ರಂ' ಎಂದೂ ಬಸವೇಶನು 'ಶೈವಸಂಪದಂ' ಮತ್ತು 'ಶುದ್ಧ ಸರೋನಿಧಿ ತರಂಗ ಮೂಲಾನಿಮಗ್ನಚಿತ್ತಂ' ಎಂದು ಹೇಳಿ ರುವುದರಿಂದ ಬಸವೇಶನು ಶುದ್ಧ ಶೈವ ಬ್ರಾಹ್ಮಣ ಜಾತಿಯಲ್ಲಿ ಕಮ್ಮೆ ಕುಲದಲ್ಲಿ ಹುಟ್ಟಿದವನು ಎಂಬುದು ಸ್ಪಷ್ಟ. ಈ ಪಂಗಡದವರನ್ನು ಸಾಮಾನ್ಯವಾಗಿ 'ಮಾಹೇಶ್ವರರು' ಎನ್ನುತ್ತಾರೆ. ಏಕೆಂದರೆ ಅದೇ ಗ್ರಂಥದಲ್ಲಿ ಹೇಳಿರುವಂತೆ.– ಇವನು ಹೊಕ್ಕುದು ' ಮಾಹೇಶ್ವರನ ಮನೆಯಂ, ನೆರೆದವರು ಹತ್ತೆಂಟು ಗ್ರಾಮದ ಮಾಹೇಶ್ವರರು. ಕೇತಕೀದಳವನ್ನು ಕಂಡುದು "ಸಹಸ್ರ ಮಾಹೇಶ್ವರರ ಕಕ್ಷ ಪುಟದ ಸಜ್ಜೆಗಳನುಪ್ಪರಿಸಿ ಸರ್ವಲಿಂಗಗಳ ಉತ್ತಮಾಂಗದೊಳು". ಈ ಗ್ರಂಥದಲ್ಲಿಯೇ ಈತನಿಗೆ ಜಾತಿ ಕರ್ಮವನ್ನು ಮಾಡಿದುದನ್ನು ಹದಿನಾರನೆಯ ವರ್ಷದಲ್ಲಿ; ಈತನು ಜನಿವಾರವನ್ನು ತೆಗೆದು ಹಾಕಿದನೆಂಬುದನ್ನು ಹೇಳಿರುವುದರಿಂದ ಈತನು ಹುಟ್ಟಿದುದು ಜಾತಕ ಕರ್ಮ ಉಪನಯನ ಕರ್ಮಗಳನ್ನು ಮಾಡುವ ವೈದಿಕ ಬ್ರಾಹ್ಮಣರ ಜಾತಿ ಯಲ್ಲಿ ಎಂಬುದು ಸ್ಪಷ್ಟ. ಆರಾಧ್ಯ ಬ್ರಾಹ್ಮಣರ ಚತುರಾಚಾರ್ಯರಲ್ಲಿ ಒಬ್ಬನಾದ ಏಕೋರಾಮನನ್ನು ಏಕೋರಾಮ ಪುರಾಣದಲ್ಲಿ ಕಮ್ಮೆ ಕುಲದವನೆಂದು ಹೇಳಿದೆ. ಶ್ರೀಕರ ಭಾಷ್ಯದಲ್ಲಿ ಇವನನ್ನು 'ಶ್ರೀಮದ್ದಂಡ ಶಿಖೋಪವೀತ'ನೆಂದು ಹೇಳಿದೆ. ಅಲ್ಲದೆ ಪದ್ಮರಾಜ ಪುರಾಣದಲ್ಲಿ ಹೇಳಿರುವದಕ್ಕನುಸಾರವಾಗಿ ಲಿಂಗ ಯಜ್ಞೋಪವೀತಧಾರಿಯಾದ ಪದ್ಮರಸನು ಕವಿ ಚರಿತ್ರೆಯಲ್ಲಿ ಹೇಳಿದಂತೆ 'ಕಮ್ಮೆ ಕುಲವಲ್ಲಭ ಗೌರಪನ ಅಕ್ಕ ಮಂಗಳೆಯ ಮಗನು'. ಆದುದರಿಂದ ಬಸವೇಶ್ವರನು ಹುಟ್ಟಿದ ಕಮ್ಮೆ ಕುಲದಲ್ಲಿ ಲಿಂಗ ಯಜ್ಞೋಪವೀತ ಧರಿಸುವ ಪದ್ಧತಿಯಿತ್ತು.

( ಮುಂದುವರಿಯುವುದು )

---

## ಪ್ರೇಮವೇ ಶಿವ

—ತಮಿಳು ಕೃತಿಯ ಪದ್ಯಾನುವಾದ **ತಿರುಮಂದಿರಂ**

ಪ್ರೇಮವೂ ಶಿವನೂ ಬೇರೆಯೆಂಬರು ತಿಳಿಗೇಡಿಗಳು
ಪ್ರೇಮವೇ ಶಿವನೆಂಬುದನು ಯಾರೂ ತಿಳಿಯದಿಹರು
ಪ್ರೇಮವೇ ಶಿವನೆಂಬುದನು ಎಲ್ಲರೂ ತಿಳಿದಬಳಿಕ
ಪ್ರೇಮವೇ ಶಿವನಾಗಿ ನೆಲಸಿರ್ಪನಲ್ಲಾ ! —ನ. ಮುನಿಸ್ವಾಮಿ

# ಬಾಗಿಲು ತೆರೀತೇನೆ

(ಮಲಯಾಳದಲ್ಲಿ ಪಿ. ಕೇಶವ ದೇವ್)

ಅನುವಾದ —ಡಾ॥ ಬಿ. ಕೆ. ತಿಮ್ಮಪ್ಪ

**ಕಿಟಕಿಯಿಂದ ಹೊರಗೆ-ಒಳಗೆ**

ಯಾರು ?

ಶ್-ಶ್-ಶ್ – ! ನಾನು !

ಅಯ್ಯಯ್ಯೋ – ಇಷ್ಟು ಹೊತ್ತಿನಲ್ಲಿ ಯಾಕೆ ಇಲ್ಲಿಗೆ ಬಂದದ್ದು ? ಹೇಗೆ ಬಂದದ್ದು ?

ನಾನು ಗೋಡೆ ನೆಗೆದು ಬಂದೆ.

ಅಣ್ಣ ಇನ್ನೂ ಮಲಗಿಲ್ಲ; ಓದ್ತಾ ಇದ್ದಾನೆ.

ನಾನು ಅದನ್ನು ನೋಡಲಿಲ್ಲ.

ಅಮ್ಮ ಅಪ್ಪ ಇನ್ನೂ ಮಲಗಿಲ್ಲ.

ನನಗೆ ಅದು ಗೊತ್ತಿಲ್ಲ.

ಈ ರಾತ್ರಿ ಹೊತ್ತಿನಲ್ಲಿ ಯಾಕೆ ಇಲ್ಲಿಗೆ ಬಂದದ್ದು ?

ಒಂದು ಸಲ ನೋಡಬೇಕು ಅನ್ನಿಸ್ತು.

ಹಗಲು ಹೊತ್ತು ಕಂಡರೆ ಸಾಲದಾ ?.

ರಾತ್ರೀಲೂ ಕಾಣಬೇಕು ಅನ್ನಿಸಿತು.

ಸ್ವಲ್ಪ ತಾಳ್ಮೆ ಅನ್ನೋದು ಬೇಡವಾ ?.

ಒಂದು ವರ್ಷ ಆಯ್ತಲ್ಲ ನಾನು ತಾಳೋದಕ್ಕೆ ಹೊರಟು ? ಅದಕ್ಕೊಂದು ಮಿತಿ ಇಲ್ಲವಾ ?.

ನಾನು ತಾಳಿಕೊಂಡಿಲ್ಲವಾ ?.

ಕೆಲವರಿಗೆ ತಾಳೋ ಅಂಥ ಶಕ್ತಿ ಹೆಚ್ಚಾಗಿರಬಹುದು.

ನನ್ನ ಮಾನ .........

ನನಗೂ ಇಲ್ಲವಾ ಮಾನ ? ನಾನು ಹೀಗೆ ಒಬ್ಬ ಕಳ್ಳನ ಹಾಗೆ ಬಂದು ನಿಂತುಕೊಳ್ಳಬೇಕಾದವನಾ ?.

ಮೆಲ್ಲಗೆ ಹೇಳಿ, ಇನ್ನೂ ಯಾರೂ ಮಲಗಿಲ್ಲ.

ಒಂದು ವರ್ಷದಿಂದ ನಾನೂ ಮಲಗ್ತಾ ಇಲ್ಲ ನನ್ನ ಶರೀರದಲ್ಲಿ ರಕ್ತ

ಸಂಚಾರವೇ ಆಗ್ತಿಲ್ಲ. ನನಗೆ ಉಸಿರಾಡೋದಕ್ಕೂ ಆಗ್ತಾ ಇಲ್ಲ.

ಹೀಗೆ ಹೇಳಿ ನನ್ನನ್ನು ಸಂಕಟಪಡಿಸ ಬೇಡಿ.

ಯಾರನ್ನೂ ಸಂಕಟ ಪಡಿಸಬೇಕೂಂತ ನಾನು ಎಣಿಸಿಲ್ಲ. ನನ್ನ ಸಂಕಟ ನಾನು ಹೇಳಿಕೊಂಡೆ, ಅಷ್ಟೆ. ನನ್ನ ಹೃದಯ ನಷ್ಟ ಹೊಂದಿತು. ನನ್ನ ಉಸಿರಿನ ನಾಳ ಕೂಡ ನಷ್ಟ ಹೊಂದಿ ಹೊಯ್ತು.

ಈಗ ನಾನೇನು ಮಾಡಬೇಕು ?.

ಸ್ವಲ್ಪ ಹೊತ್ತು ಕಿಟಕಿ ಹತ್ತಿರ ಬಂದು ನಿಂತುಕೊ. ನಾನು ಸ್ವಲ್ಪ ಮುಟ್ಟುತ್ತೇನೆ.

ಮುಟ್ಟಿದರೆ ಆ ಮೇಲೆ_____

ಇಲ್ಲ ಮುಟ್ಟಿದರೆ ಸಾಕು. ಮುಟ್ಟಿಬಿಟ್ಟು ಹೋಗಿಬಿಡ್ತೀನಿ.

ಎಂಥ ಒತ್ತಾಯ ಇದ್ದು ?.

ಒತ್ತಾಯ ಅಲ್ಲ, ಯಾಚನೆ.

ಯಾರಾದರೂ ಕಂಡರೆ_____

ಇಲ್ಲಿ ಬೇರೆ ಯಾರೂ ಇಲ್ಲ.

ಅಮ್ಮ ಎಲ್ಲಾದರೂ ಈ ಕಡೆ ಬಂದರೋ.

ಬರೋದಿಲ್ಲ.

ಬಂದರೋ ?.

ನೋಡದಹಾಗೆ ಆ ಲೈಟು ಆರಿಸು.

ಇದ್ಯಾವ ಒಳ್ಳೆ ಬುದ್ಧಿ !.

ಒಳ್ಳೆ ಬುದ್ಧಿ ಅಲ್ಲ ಅಂತ ಮೊದಲೇ ಗೊತ್ತಾಗಲಿಲ್ಲವಾ ?.

ಗೊತ್ತಾಯ್ತು, ಗೊತ್ತಾಯ್ತು, ಸೈಕಲ್ ಮೇಲೆ ಬಂದು ನನ್ನ ತಲೆ ಮೇಲಿದ್ದ ಹೂವು ಕಿತ್ತಾಗಲೇ ನನಗೆ ಗೊತ್ತಾಯ್ತು; ಒಳ್ಳೇ ಬುದ್ಧಿ ಅಲ್ಲ ಅಂತ ನನಗೆ ಮೊದಲು ಬರೆದ ಕಾಗದದಿಂದಲೂ.

"ನಾನು ಉತ್ತರ ಬರೆದದ್ದರಲ್ಲಿ ತಪ್ಪೇನು ? ನನಗೆ ಕಾಗದ ಬರೆದದ್ದರಿಂದಲೇ ನಾನು ಉತ್ತರ ಕೊಟ್ಟದ್ದು".

"ಉತ್ತರ ಬರೆದದ್ದರಿಂದಲೇ ತಾನೇ ನಾನು ಮತ್ತೆ ಕಾಗದ ಕೊಟ್ಟದ್ದು ?".

ಎಂಥಾದ್ದೆಲ್ಲ ಬರೆಯೋದು !.

ಬರೆಯದೆ ಇರೋ ಒಂದು ವಿಷಯ ಇದೆ. ಅದೊಂದು ಗುಟ್ಟು ಸ್ವಲ್ಪ ಹತ್ತಿರ ಬಂದರೆ ಹೇಳ್ತೀನಿ.

ಹೇಳಿ ಇಲ್ಲಿ ನಿಂತರೂ ಕೇಳಿಸುತ್ತೆ.

ಹಾಗಾದರೆ ಈಗ ಹೇಳೋದಿಲ್ಲ.

ನಾನದನ್ನ ಕೇಳೋದು ಬೇಡ.
ಹಾಗಿದ್ದರೆ ನಾನು ಹೋಗಲಾ ?
ಒಂದು ವಿಷಯ ಕೇಳೋದು ಮರೆತಿದ್ದೆ.
ನನ್ನ ಹತ್ರ ಏನೂ ಕೇಳಬೇಡ.
ಪದ್ಮಾವತಿ ಪಾಸಾದಳಾ ?.
ಉ್ಞ ! ನನಗೆ ಗೊತ್ತಿಲ್ಲ.
ಸ್ವಂತ ತಂಗಿ ಪರೀಕ್ಷೇಲಿ ಪಾಸಾದಳೋ ಇಲ್ಲವೋ ಅನ್ನೋದು ಕೂಡ ಗೊತ್ತಿಲ್ಲವಾ ?
ನನ್ನ ವಿಷಯವೇ ನನಗೆ ಸರಿಯಾಗಿ ಗೊತ್ತಿಲ್ಲ.
ಮತ್ತೇನು ಗೊತ್ತಿರೋದು ? ಈಶ್ವರನಾ ?
ಈಶ್ವರನಲ್ಲ, ಈಶ್ವರಿ !
ಗೊತ್ತಾ ?
ಗೊತ್ತು. ಹತ್ತಿರ ಬಂದರೆ ದೂರ ಹೋಗುವ ಒಬ್ಬಳು ಮಾಯೆ ಅಂತ.
ಹತ್ತಿರ ಬರ್ತಾಳೆ ಎನ್ನುವ, ದೂರ ಹೋಗ್ತಾಳೆ ಎನ್ನುವ ತೋರಿಕೆಯೇ ಮಾಯೆ. ಸಮೀಪಿಸಬೇಕಾದ ರೀತಿಯಲ್ಲಿ ಸಮೀಪಿಸಿದರೆ ದೂರ ಹೋಗೋದಿಲ್ಲ.
ಇನ್ನು ಯಾವ ರೀತಿಯಲ್ಲಿ ಸಮೀಪಿಸೋದು ?
ಗೋಡೆ ದಾಟಬಂದರೆ ಸಾಲದು. ಅದು ಸರಿಯಾದ ದಾರಿ ಅಲ್ಲ
ಹಾಗಾದರೆ ಹೇಗೆ ಬರಬೇಕು ?
ನೇರವಾಗಿ ಬರಬೇಕು ಗೇಟಿನ ಮೂಲಕ.
ಗೇಟು ಮುಚ್ಚಿದೆಯಲ್ಲ ? ಹೇಗೆ ಗೇಟಿನ ಮೂಲಕ ಬರೋದು ?
ಬರಬೇಕಾದ ರೀತಿಯಲ್ಲಿ ಬಂದರೆ ಗೇಟು ಮುಚ್ಚಿರೋದಿಲ್ಲ.
ಬರಬೇಕಾದ ರೀತಿಯಲ್ಲಿ ಬರದೇ ಇರೋದು ನನ್ನ ತಪ್ಪೇನು ?
ಮತ್ತೆ ಯಾರ ತಪ್ಪು ?
ತಂದೆ ತಾಯಿ ಒಪ್ಪಬೇಡವಾ ?
ಯಾರ ತಂದೆ ತಾಯಿ ?....ನನ್ನ ತಂದೆ ತಾಯಿ ಹೇಳಿದರಾ, ಬರಬೇಕಾದ ರೀತಿಯಲ್ಲಿ ಬರಬೇಡ ಅಂತ ?
ನನಗೂ ತಂದೆ ತಾಯಿ ಇಲ್ಲವಾ ?
ಬರಬೇಕಾದ ರೀತಿಯಲ್ಲಿ ಬರಬೇಡ ಅಂತಲೂ, ಗುಟ್ಟಾಗಿ ಬಂದರೆ ಸಾಕು ಅಂತಲೂ ಅವರು ಹೇಳಿದರಾ ?
ನಾನು ಹೋಗ್ತೀನಿ.
ನಾನು ಬರಹೇಳಿ ಬಂದದ್ದಲ್ಲವಲ್ಲ ?

ತೊಂದರೆ ಕೊಟ್ಟಿದ್ದಕ್ಕೆ ಕ್ಷಮಿಸಬೇಕು. ನಾನು ಹೋಗ್ತೀನಿ.

ತಂದೆಗೆ ಪ್ರೊಮೋಷನ್ ಸಿಕ್ಕಿತು ಅಂತ ಕೇಳಿದೆನಲ್ಲ ?

ಅದಕ್ಕೆ ನಾನೇನು ಮಾಡಬೇಕು ?

ತಂದೆಗೆ ಪ್ರೊಮೋಷನ್ ಸಿಕ್ಕಿದರೆ ಮಗ ಸಂತೋಷಪಡಬೇಕಾದದ್ದಲ್ಲವಾ ?

ಯಾರಿಗೆ ಪ್ರೊಮೋಷನ್ ಸಿಕ್ಕಿದರೂ ನನಗೆ ಯಾವ ಸಂತೋಷವೂ ಇಲ್ಲ... ನಾನು ದುಃಖ ಅನುಭವಿಸೋದಕ್ಕೆ ಅಂತಲೇ ಹುಟ್ಟಿದವನು, ನಾನು ಅನುಭ... ಸ್ತೀನಿ. ಹೋಗ್ತೀನಿ.

ನಿಲ್ಲಿ ಮತ್ತೊಂದು ವಿಷಯ ಹೇಳೋದಿದೆ.

ಬೇಡ. ತಂದೆ ತಾಯಿ ಇನ್ನೂ ಮಲಗಿಲ್ಲ. ಅವರು ಯಾರಾದರೂ ಈ... ಕಡೆ ಬಂದಗಿಂದಾರು.

"ಅಣ್ಣನಿಗೆ ಕೆಲಸ ಸಿಕ್ಕಿತು".

"ಸಂತೋಷ ಪಟ್ಟುಕೊ".

"ನಿಮ್ಮ ಒಬ್ಬ ಸ್ನೇಹಿತನಿಗೆ ಕೆಲಸ ಸಿಕ್ಕಿದಾಗ ನೀವೂ ಸಂತೋಷ ಪಡಬೇ... ಕಾದ್ದಲ್ಲವಾ ? ".

"ಎಂಥ ಸ್ನೇಹ ! ಯಾರ ಸ್ನೇಹ ! ಯಾವುದೂ ಶಾಶ್ವತವಲ್ಲ "

"ಸನ್ಯಾಸಿಯಾಗೋ ಹಾಗಿದೆಯಲ್ಲ ಮಾತಿನ ಧಾಟಿ ? "

"ಕಾಷಾಯ ವಸ್ತ್ರ ಧರಿಸಿಕೊಂಡೇ ನಾನಿನ್ನು ಕಾಣಿಸಿಕೊಳ್ಳೋದು ! "

"ಜಡೆ ಇರುತ್ತಾ ? "

"ಜಡೆಯೂ ಇರುತ್ತೆ, ಎಲ್ಲ ಇರುತ್ತೆ "

"ಕಮಂಡಲು ? "

"ಅದೂ ಇರುತ್ತೆ "

"ಶಿಷ್ಯರು ? "

"ಶಿಷ್ಯರೂ ಇರ್ತಾರೆ. ಶಿಷ್ಯೆಯರಿರೋದಿಲ್ಲ ಅಷ್ಟೆ. "

"ಅದ್ಯಾಕೆ ? "

"ಸ್ತ್ರೀ ಎನ್ನುವುದು ಮಾಯೆ. ಮಾಯೆಯಿಂದ ಮುಕ್ತಿ ದೊರೆತಾಗ ಮಾತ್ರವೇ ಮೋಕ್ಷ ದೊರಕೋದು "

"ಹಾಗಾದರೆ ಇನ್ನು ಮೇಲೆ ನನ್ನನ್ನ ಕಾಣಬೇಡಿ. ಲೈಟ್ ಆರಿಸ್ತೇನೆ ".

ಹೌದು ಬೆಳಕೇ ಮಾಯೆ ಅದನ್ನು ಆರಿಸು....

ಮಾಯೆಯಿಂದ ಮುಕ್ತಿ ದೊರೆಯಿತಾ ?

ಹ್ಞಂ.

ಕೈ ತುಂಬ ಬಿಸಿಯಾಗಿದೆಯಲ್ಲ ? '

ಕೈಗೆ ಮಾತ್ರವಲ್ಲ, ನನ್ನ ಶರೀರ ಪಿಡೀತಪಿಸುತ್ತೆ.

ಕತ್ತಿನಲ್ಲೂ ಬಿಸಿ ಇದೆಯಲ್ಲ, ಕೆನ್ನೆಯಲ್ಲೂ ಇದೆ !.

ನಾನು ಹೇಳಲಿಲ್ಲವಾ ? ನನ್ನ ಶರೀರವಿಡೀ ಸುಟ್ಟು ಹೊಗ್ತಿದೆ ಅಂತ ...............

ನನ್ನ ಕೈಗೆ ಏನೋ ಚುಚ್ಚಿದ ಹಾಗಾಯ್ತು ಚೌಲಿಗೆ ಪಿನ್ ಹಾಕಿದ್ದೆಯಾ ?

ಹ್ಞುಂ ಹುಕ್ ಕಿತ್ತು ಹೋಗಿತ್ತು.

ಬ್ರೇಸಿಯರ್ಸ್ ಇಷ್ಟು ಗಟ್ಟಿಯಾಗಿ ಕಟ್ಟಿರೋದು ಯಾಕೆ ?.

ಅದು.........ಅದು........

ಈ ಕಿಟಕಿ ಕಂಬಿಗಳು.......ಇವನ್ನೆಲ್ಲ ನಾನೀಗ ಮುರಿದು ಹಾಕಿಬಿಡ್ತೀನಿ !.

ನನ್ನ ಎದೆ ಯಾಕೋ ನೋಯ್ತಾ ಇದೆ!.

ನನ್ನ ಕೈ ತಡವಿದಾಗ ಹೋಗುತ್ತೆ

ಮತ್ತೆ..............

ಏನು ?

ಒಂದು ದಿನದಲ್ಲಿ ಎಷ್ಟು ಸಿಗರೇಟು ಸೇದ್ತೀರಿ ?

ಸಿಗರೇಟಿನ ವಾಸನೆ ನಿನಗೆ ಇಷ್ಟವಿಲ್ಲವಾ ?

ಇಷ್ಟ. ಆದರೂ ಹೆಚ್ಚು ಸಿಗರೇಟು ಸೇದಿದರೆ ಗಂಟಲ ನಾಳ ಒಣಗುತ್ತೆ.

ಒಣಗಲಿ ಯಾರಿಗೇನು ನಷ್ಟ ಅದರಿಂದ !.

ನನಗೆ ನಷ್ಟ.

ಈ ಕಿಟಕಿ ಕಂಬಿ ! ನಾನೀಗ ಇವನ್ನೆಲ್ಲಿ ಕಿತ್ತು ಎಸೆದು ಬಿಡ್ತೀನಿ.

ಅಣ್ಣನಿಗೆ ಕೇಳಿಸುತ್ತೆ.

ಕೇಳಿಸಿದರೆ ನನಗೇನು ?

ಈ ಕಡೆ ಬಂದಾನು.

ಬಂದರೆ ಏನು ಮಾಡ್ತಾನೆ ? ನನ್ನನ್ನು ಕೊಂದು ಹಾಕ್ತಾನಾ ?.

ಒಳ್ಳೆಯವನಲ್ಲ!.

ದುಷ್ಟ !.

ಅಯ್ಯೋ ದೇವರೇ ಸ್ವಲ್ಪ ಮೆಲ್ಲಗೆ ಮಾತಾಡಿ.

ಈ ಪ್ರಪಂಚವೆಲ್ಲ ನಡುಗಿ ಹೋಗೋ ಹಾಗೆ ಗಟ್ಟಿಯಾಗಿ ಕೂಗಿಬಿಡ್ತೀನಿ.

ಎದೆಯಲ್ಲಿ ತುಂಬ ರೋಮವುಂಟಲ್ಲ ?

ಅದು ನಿನಗಿಷ್ಟತಾನೆ ?

ನನಗೆ ತುಂಬ ಇಷ್ಟ.

ಈ ಕಿಟಕಿ ಕಂಬಿ ! ಇವುಗಳ್ನ ನಾನು ಮುರಿದು ಹಾಕೋದು ಬೇಡ ಅಂತಿದ್ದರೆ ಬಾಗಿಲು ತೆಗಿ.

ಇಲ್ಲ; ತೆರೆಯೋದಿಲ್ಲ.
ತೆರೆಯಬೇಕು.
ನನ್ನನ್ನು ಒತ್ತಾಯಿಸ ಬೇಡಿ.
ನಾನು ಒಡೆದು ತೆರೀತೀನಿ.
ಅಣ್ಣ ಒಳ್ಳೆಯವನಲ್ಲ.
ದುಷ್ಟ !
ನನ್ನ ಬಿಡಿ.
ಬಾಗಿಲು ತೆಗಿ.
ಸ್ವಲ್ಪ ಹತ್ರ ನಿಂತುಕೊಳ್ಳಿ.

ಇನ್ನು ಎಷ್ಟು ಹತ್ರ ಬರಲಿ ? ......... ಈ ಕಿಟಕಿ ! ಈ ಗೋಡೆ ! ಯಾಕೆ ಇದನ್ನೆಲ್ಲ ಇಟ್ಟಿರೋದು ? ಇವನ್ನೆಲ್ಲ ನಾನು ಒಡೆದು ಮುರಿದು ಚೂರುಮಾಡಿ ಹಾಕ್ತೀನಿ

ಬೇಡ; ಬಾಗಿಲು ತೆರೀತೇನೆ.

---

# ಸಿದ್ಧಗಂಗೆಯ ಬೆಳಕು

—ಜಿ. ಎಸ್. ಸಿದ್ಧಲಿಂಗಯ್ಯ

ಗವಿಯೂ ಹೊಗಲಿಲ್ಲ; ಬೋಧಿಯನರಸಿ ಮರಗಿಡದ
ಬುಡಕ್ಕೂ ಹೊಗಲಿಲ್ಲ; ಆಳ ತನ್ನೊಳಗಿಳಿದು
ಕಂಡುದನದೆಲ್ಲರಿಗು ಹಂಚುವಾಸೆಯ ಹೊತ್ತು
ಸಿದ್ಧಗಂಗೆಗೆ ಬೆಳಕ ತಿಲಕವಿಟ್ಟವರಿವರು !

ಮಹಮನೆಯ ಹೊಕ್ಕಂತೆ ಸ್ವಾಗತಿಸುವುದು ಪ್ರೀತಿ;
ಅನುಭವದ ಅಮೃತ ಮೈತೆರೆಯುವುದು: ಭಕ್ತಿಯಲಿ
ನಿಂದವರು, ಹರಕೆಯೊಪ್ಪಿಸಲೆಂದು ಬಂದವರು,
ನುಡಿಯೆ ನಡೆಯಾಗುವುದ ಕಾಂಬ ಕೌತುಕದವರು,
ಜೇನಕ್ಕರೆಗೆ ಬಾಯಾರಿ ಜಾತ್ರೆ ನೆರೆದವರು
ಎಲ್ಲರೆದುರೂ ಇವರು ಬೆಟ್ಟಕ್ಕೇ ಕೈಕಾಲು
ಗಳುಮೂಡಿ ನಡೆದಂತೆ ಸಾಕಾರವಾಗುವರು
ಶರಣ ಲೋಕದಲಿ ನಮ್ಮನುಸಿರಾಡಿಸುವರು
ಜ್ಞಾನದಲಿ ಪ್ರೀತಿಯಲಿ ಶಿವಕುಮಾರರು ಇವರು
ಬೆಳೆಯುತ್ತ ಹೋಗುವರು, ನಾವು ಬೆಳೆಬೆಳೆದಷ್ಟು.

# "ಸ್ಫೂರ್ತಿ ಜ್ಯೋತಿ"

ದೇವರು ಎಂಥ ಪ್ರಜಾಪ್ರಭುತ್ವವಾದಿ! ನಮ್ಮ ಎಷ್ಟು ತಪ್ಪುಗಳನ್ನು, ಮೋಸಗಳನ್ನು ಸಹಿಸುತ್ತಾನೆ. **—ಗಾಂಧೀಜಿ**

ದೇವರು ನಮ್ಮ ಕಡೆ ಇರುವನೇ ಎಂಬುದು ಮುಖ್ಯವಲ್ಲ. ನಾವು ದೇವರ ಕಡೆ ಇರುವೆವೇ? ಎಂಬುದೇ ಮುಖ್ಯ. **—ಅಬ್ರಹಾಂಲಿಂಕನ್**

ಬೇಕುಬೇಕು ಎಂಬ ಅತೃಪ್ತಿಯೇ ಬಡತನ; ಸಾಕುಸಾಕು ಎಂಬ ಸಂತೃಪ್ತಿಯೇ ಸಿರಿವಂತಿಕೆ. **—ಆಯ್ದಕ್ಕಿ ಲಕ್ಕಮ್ಮ**

ಮಾನವರು ವಿಧಿಯ ಕೈಗೊಂಬೆಗಳು ಎನ್ನುವುದಕ್ಕಿಂತ, ತಮ್ಮ ಮನಸ್ಸಿನ ಬಂಧಿಗಳು ಎಂದು ಹೇಳುವುದು ಸೂಕ್ತವಾದೀತು. **—ಫ್ರಾಂಕ್ಲಿನ್ ರೂಸ್‌ವೆಲ್ಟ್**

ಒಬ್ಬನು ರಾಜನೇ ಇರಲಿ, ಜನಸಾಮಾನ್ಯನೇ ಇರಲಿ, ಮನೆಯಲ್ಲಿ ಅವನ ಸ್ಥಾನವು ಭದ್ರವಾಗಿದ್ದರೆ ಮಾತ್ರ ಅವನು ಅದೃಷ್ಟವಂತ ಆಗಬಹುದು. **—ಗಯಟೆ**

ಧರ್ಮಕ್ಕಾಗಿ ಸಾಯುವವರು ಸಿಗಬಹುದು, ಧರ್ಮಕ್ಕಾಗಿ ಬದುಕುವವರು ಸಿಗುವುದು ದುರ್ಲಭ. **—ಲೂಯಿಸ್ ಬೋರ್ಜನ್**

ತಾನು ಅಭ್ಯಾಸ ಮಾಡದೆ ಅಧ್ಯಾಪಕ ಇತರರಿಗೆ ಕಲಿಸಲಾರ; ತಾನು ಉರಿಯದ ದೀಪ ಇನ್ನೊಂದು ದೀಪವನ್ನು ಉರಿಸಲಾರದು. **—ರವೀಂದ್ರನಾಥಠಾಕೂರ್**

ಶಕ್ತಿ ಸಾಧಿಸದಿದ್ದುದನ್ನು ಶಾಂತಿ ಸಾಧಿಸಬಲ್ಲುದು. **—ಎಡ್ಮಂಡ್ ಬರ್ಕ್**

ಬಡವರು ನೀವೆಂದು ಯೋಚಿಸಬೇಡಿ, ಹಣವೊಂದೇ ಶಕ್ತಿಯಲ್ಲ ಒಳ್ಳೆಯತನ, ಪಾವಿತ್ರ್ಯಗಳೇ ನಿಜವಾದ ಶಕ್ತಿಗಳು. **—ವಿವೇಕಾನಂದ**

ಮನೆಯೊಳಗಣ ಕಿಚ್ಚು ಮನೆಯನ್ನೇ ಸುಡುವಂತೆ, ಮನದೊಳಗಣ ಕೋಪದ ಕಿಚ್ಚು ತನ್ನನ್ನೇ ಸುಡುವುದು. **—ಬಸವಣ್ಣ**

ಇನ್ನೊಬ್ಬರನ್ನು ಸರಿಯಾಗಿ ತಿಳಿದುಕೊಂಡಾತ ಪಂಡಿತ, ಆದರೆ ತನ್ನನ್ನೇ ಸರಿಯಾಗಿ ತಿಳಿದುಕೊಂಡಾಗ ಧೀಮಂತ. **—ಲಾವೋತ್ಸೆ**

ಕೊಳಲ ದನಿಗೆ ಸರ್ಪ ತಲೆದೂಗಿದರೇನು? ಒಳಗಣ ವಿಷದ ಬಯಕೆ ಅಳಿಯದನ್ನಕ್ಕ. **—ಅಕ್ಕಮಹಾದೇವಿ**

# ಕೃಷಿ ಹಾಗೂ ಮಹಿಳೆ

—ಡಿ. ವೆಂಕಟರಾವ್, ಎಂ.ಎ

ಭಾರತದ ಕೃಷಿಯಲ್ಲಿ ಮಹಿಳೆಗಿರುವ ಸ್ಥಾನ ಅಪೂರ್ವವಾದುದು. ಗ್ರಾಮೀಣ ಆರ್ಥಿಕತೆಗೆ ಮತ್ತು ಕೃಷಿಯ ಅಭಿವೃದ್ಧಿಗೆ ಅವಳ ಕೊಡುಗೆ ಅಪಾರ. ಕೃಷಿಯನ್ನು ಆರಂಭ ಮಾಡಿದವಳೇ ಮಹಿಳೆ ಎನ್ನಲಾಗಿದೆ. ಕೃಷಿ ಕಲೆಯನ್ನು ಮೊದಲು ಕರಗತ ಮಾಡಿಕೊಂಡವಳೇ ಮಹಿಳೆ ಎಂದು ಕೃಷಿಯ ಇತಿಹಾಸ ಹೇಳುತ್ತದೆ. ಅಂದರೆ ಕೃಷಿಯನ್ನು ಮಹಿಳೆ ತಾನು ಕಲಿತನಂತರ ಪುರುಷನಿಗೆ ಕಲಿಸಿದಳು ಎನ್ನಬಹುದು. ಹಿಂದೆ ಉದರ ಪೋಷಣೆಗಾಗಿ ಕಾಡು ಪ್ರಾಣಿಗಳ ಬೇಟೆಯಾಡುತ್ತಿದ್ದಾಗಲೇ ಸೂಕ್ಷ್ಮಮತಿಯ ಮಹಿಳೆ ನೈಸರ್ಗಿಕ ಬೆಳೆಯ ಮೇಲೆ ಕಣ್ಣಿಟ್ಟಳು. ಗೆಡ್ಡೆ, ಗೆಣಸು, ಹಣ್ಣುಗಳ ರುಚಿ ಕಂಡ ಅವಳು ತನ್ನ ಜಾಣ್ಮೆಯನ್ನು ಉಪಯೋಗಿಸಿ ಬೀಜ ಚೆಲ್ಲಿದಳು. ವಿವಿಧ ಬಗೆಯ ಬೆಳೆಗಳನ್ನು ಬೆಳೆದಳು. ಕೃಷಿ ಪ್ರಕೃತಿಯ ಕೈಗೊಂಬೆ ಎನ್ನುವುದನ್ನು ಅರಿತಳು. ತನ್ನ ಅನುಭವಗಳಿಂದ ಒರಟು ಕೃಷಿಗೆ ನಾಜೂಕಿನ ರೂಪುಕೊಟ್ಟಳು. ಅನಾಗರಿಕ ಜೀವನದಲ್ಲಿ ನಾಗರೀಕತೆಯನ್ನು ತುಂಬಿದಳು. ಅಲೆದಾಟದ ಬದುಕಿಗೆ ಹೊಸತಿರುವನ್ನು, ಹೊಸ ಅರ್ಥವನ್ನು ಕೊಟ್ಟಳು. ಹೀಗೆ ಅಂದು ಮಹಿಳೆಯಿಂದ ಆರಂಭವಾದ ಕೃಷಿ ಇಂದು ಸಂಶೋಧನೆ, ವಿಜ್ಞಾನಗಳನ್ನು ಮೈಗೂಡಿಸಿಕೊಂಡು ಶಾಸ್ತ್ರೀಯ ಕೃಷಿ ಉದ್ಯಮವಾಗಿ ಪರಿಣಮಿಸಿದೆ.

ಕೃಷಿಯಲ್ಲಿ ಮಹಿಳೆ ಭಾಗವಹಿಸುವುದು ಹಿಂದಿನಿಂದಲೂ ನಡೆದುಕೊಂಡು ಬಂದಿದೆ. ಭಾರತದ ಇತಿಹಾಸವನ್ನು ಅವಲೋಕಿಸಿದಾಗ ಬಹು ಪೂರ್ವದಿಂದಲೂ ನಮ್ಮ ಮಹಿಳೆಯರು ಪುರುಷರ ಹಾಗೆ ಕೃಷಿಯಲ್ಲಿ ಕಾರ್ಯನಿರತರಾಗಿದ್ದುದು ಕಂಡು ಬರುತ್ತದೆ. ಭಾರತದಲ್ಲಿ ಮಹಿಳೆ ಕೃಷಿಗೆ ಅಂಟಿಕೊಂಡೇ ಬೆಳೆದು ಬಂದಿದ್ದಾಳೆ. ಮಹಿಳೆಗೂ ಮಣ್ಣಿಗೂ ಬಿಗಿಯಾದ ನಂಟಿರುವುದು ರಾಮಾಯಣ, ಮಹಾಭಾರತ ಗ್ರಂಥಗಳಲ್ಲಿ ಕಾಣಬಹುದು. ಜನಕ ಮಹಾರಾಜ ತನ್ನ ಪತ್ನಿಯೊಂದಿಗೆ ಚಿನ್ನದ ನೇಗಿಲಿನಿಂದ ಭೂಮಿಯನ್ನು ಉಳುತ್ತಿದ್ದನೆಂದು ರಾಮಾಯಣದಲ್ಲಿ ತಿಳಿಸಲಾಗಿದೆ. ಅಧಿಕ ಬೆಳೆಯನ್ನು ಉತ್ಪಾದಿಸಲು 'ಸೀತಾಯಜ್ಞ' ಮಾಡಬೇಕೆಂದು ಮಹಾನ್ ಸಂಸ್ಕೃತ ವಿದ್ವಾಂಸರು ಹೇಳಿದ್ದಾರೆ. ರಾಮಾಯಣದಲ್ಲಿ 'ಸೀತೆ' ಎಂದರೆ ಉತ್ತ ಭೂಮಿಯಿಂದ ಉದ್ಭವವಾದವಳು ಎಂದು. ಪ್ರಾಚೀನ ಗ್ರಂಥಗಳಲ್ಲಿ ಮಹಿಳೆ ಪುರುಷನೊಂದಿಗೆ ಸರಿಸಮವಾಗಿ ದುಡಿಯುತ್ತಿದ್ದಳು ಎಂದು ಉಲ್ಲೇಖಿಸಲಾಗಿದೆ. ಕೇವಲ ಹಳ್ಳಿಯ ಮಹಿಳೆ ಮಾತ್ರವೇ ಅಲ್ಲ, ಪಟ್ಟಣದ ಮಹಿಳೆಯೂ ಕೃಷಿಯ

ಬಗ್ಗೆ ಅಷ್ಟೇ ಆಸಕ್ತಿ ವಹಿಸುತ್ತಿದ್ದಳು ಎಂದು ಹೇಳಲಾಗಿದೆ. ಆಗ ಪ್ರತಿ ಗೃಹಿಣಿಯೂ ತರಕಾರಿಗಳನ್ನು ಯಾವ ಕಾಲದಲ್ಲಿ ಬಿತ್ತನೆ ಮಾಡಬೇಕೆಂಬ ಬಗ್ಗೆ ತಿಳಿದಿದ್ದಳು. ಭಾರತದಲ್ಲಿ ಮಹಿಳೆ ಕೃಷಿಯಲ್ಲಿ ಪುರುಷನೊಂದಿಗೆ ಬಹುವಾಗಿ ಸಹಕರಿಸುತ್ತಿದ್ದಳು.

ಇಂದಿಗೂ ಗ್ರಾಮೀಣ ಮಹಿಳೆಯೇ ಕೃಷಿಕಾರ್ಯಗಳ ಸೂತ್ರಧಾರಿಣಿ. ಅವಳಿಲ್ಲದೆ ಯಾವ ಕೃಷಿ ಕಾರ್ಯವೂ ನಡೆಯುವಂತಿಲ್ಲ. ಕೃಷಿಯ ಬಗ್ಗೆ ಗ್ರಾಮೀಣ ಮಹಿಳೆ ಹೊಂದಿರುವ ಜ್ಞಾನ ಭಂಡಾರ ಅಗಾಧವಾದುದು. ಭೂಮಿಯ ಹದ, ಬೀಜದ ಬಿತ್ತನೆ ನಾಟಿಯ ಕೆಲಸ, ಕಳೆ ಕೀಳುವಿಕೆ, ಕಾಳು ಬಿಡುಸುವಿಕೆ, ಗೊಬ್ಬರ ಹಾಕುವಿಕೆ, ಬೆಳೆಯನ್ನು ಕಾಯುವಿಕೆ, ಬೆಳೆ ಕುಯಿಲು ಹೀಗೆ ಕೃಷಿಯ ಪ್ರತಿಯೊಂದು ಹಂತದಲ್ಲೂ ಆವಳು ಉತ್ಸಾಹದಿಂದ ಮೈ ಬಗ್ಗಿಸಿ ದುಡಿಯಲು ಸಿದ್ಧ. ಅವಳಿದ್ದಲ್ಲಿ ಕೃಷಿ ಕಾರ್ಯಗಳಲ್ಲೂ ಅಚ್ಚುಕಟ್ಟು. ಒಪ್ಪ ಓರಣ, ಕೆಲಸಗಳೂ ಭರಭರನೆ ನಡೆದು ಬಿಡುತ್ತವೆ. ಮಣ್ಣೆಂದರೆ ಗ್ರಾಮೀಣ ಮಹಿಳೆಗೆ ಅಪಾರ ಮಮತೆ. ಕೃಷಿಯಲ್ಲಿ ಗ್ರಾಮೀಣ ಗೃಹಿಣಿ ಎಷ್ಟರ ಮಟ್ಟಿಗೆ ತಲ್ಲೀನಳಾಗಿ ಬಿಡುತ್ತಾಳೆಂದರೆ ಅವಳು ಮಿಕ್ಕ ಎಲ್ಲವನ್ನೂ ಆ ಕ್ಷಣಕ್ಕೆ ಮರೆತು ಬಿಡುತ್ತಾಳೆ. ಕೃಷಿ ಕಾರ್ಯಗಳು, ನಿರೀಕ್ಷಿತ ಮಟ್ಟದಲ್ಲಿ ಸಾಗದಾಗ, ಬೆಳೆ ಹಾಳಾದಾಗ ಅವಳ ತಳಮಳ, ಪರದಾಟ ಅಸದಳ. ಕೃಷಿ ಕಾರ್ಯಗಳಲ್ಲಿ ಪತ್ನಿ ಜೊತೆಗಿದ್ದಲ್ಲಿ ಗಂಡನಿಗೆ ಹಿಗ್ಗು. ಆದರೆ ಅದೇ ಪತ್ನಿ ಯಾವುದಾದರೂ ಕಾರಣದಿಂದ ಕೃಷಿಯಲ್ಲಿ ಪಾಲ್ಗೊಳ್ಳದಿದ್ದಾಗ ಅವನ ತಲ್ಲಣ ಹೇಳತೀರದು. ಪರಿಣಾಮ ಕೃಷಿ ಕಾರ್ಯಗಳಲ್ಲಿ ಅಸ್ತವ್ಯಸ್ತತೆ ತಲೆ ಹಾಕುತ್ತದೆ. ಹಳ್ಳಿಗಳಲ್ಲಿ ಮನೆಗೆ ಒಂದು ಹೆಣ್ಣನ್ನು ಸೊಸೆಯಾಗಿ ತರುವುದೆಂದರೆ ಮನೆ ಮಂದಿಗೆಲ್ಲಾ ಸಂತೋಷ. ಕಾರಣ ಕೃಷಿಯಲ್ಲಿ ಪಾಲ್ಗೊಳ್ಳಲು ಒಬ್ಬ ಹೆಣ್ಣಾಳು ದೊರೆತಳು ಎಂದು. ಆದೇ ಮನೆ ಮಗಳು ಮದುವೆಯಾಗಿ ಗಂಡನ ಮನೆಗೆ ಹೊರಟು ನಿಂತರೆ ಸಂತಸದಲ್ಲೂ ತುಸು ವ್ಯಥೆ. ಕಾರಣ ಒಬ್ಬ ಹೆಣ್ಣಾಳು ಕಡಿಮೆಯಾದದ್ದರಿಂದ ಕೃಷಿಗಾಗುವ ನಷ್ಟ. ಹಳ್ಳಿಗಳಲ್ಲಿ ಸಾಮಾನ್ಯವಾಗಿ ಕಂಡು ಬರುವ ದೃಶ್ಯವೆಂದರೆ ಟೀ, ಕಾಫಿ, ರಬ್ಬರ್ ತೋಟಗಳಲ್ಲಿ, ಹೊಲ ಗದ್ದೆಗಳಲ್ಲಿ ಹೊತ್ತು ಗೊತ್ತಿಲ್ಲದೆ ಕಾರ್ಯ ನಿರತರಾಗಿರುವ ಹೆಣ್ಣಾಳುಗಳು, ಇವರು ಎದುರಿಸುವ ಸಂಕಷ್ಟಗಳು, ಗಂಡಾಳುಗಳಿಗಿಂತ ಹೆಚ್ಚು. ಇವರಿಗೆ ಸಿಗುವ ಕೂಲಿಯೂ ಗಂಡಾಳುಗಳಿಗಿಂತಲೂ ಕಡಿಮೆ. ಹೊಲ ಗದ್ದೆಗಳಲ್ಲಿ ಬೆವರು ಸುರಿಸಿ ದುಡಿದು ಬರುವ ಇವರು ಮನೆಗೆಲಸಗಳಲ್ಲೂ ತೊಡಗಬೇಕು. ಹೊಲದಿಂದ ಮೇವು ತರುವುದು, ಮೇವು ಕತ್ತರಿಸುವುದು, ತಿಂಡಿ ತಯಾರಿಸಿ ಅದನ್ನೂ ನೀರನ್ನೂ ದನಕ್ಕಿಡುವುದು, ಕೊಟ್ಟಿಗೆಯನ್ನೂ ದನದ ಮೈಯನ್ನೂ ತೊಳೆಯುವುದು, ಹಾಲು ಕರೆಯುವುದು, ಬೆರಣಿ ತಟ್ಟುವುದು, ತಿಪ್ಪೇಗೊಬ್ಬರ ಮಾಡುವುದು, ಮೊಸರು ಮತ್ತು ತುಪ್ಪ

ಮಾಡುವುದು ಇತ್ಯಾದಿ ಕೆಲಸಗಳ ಹೊರೆಯನ್ನೂ ಗ್ರಾಮೀಣ ಮಹಿಳೆಯರೇ ಹೊರಬೇಕು. ವಿನೋದ ವಿಹಾರಗಳು ಇವರಿಗಿಲ್ಲ. ಜೀವಿಸಿರುವಷ್ಟು ದಿನವೂ ದುಡಿತವೊಂದೇ ಇವರ ಪಾಲಿಗೆ. ಇವರ ಗಂಡಂದಿರು ಆಗಾಗ್ಗೆ ಏನಾದರೂ ನೆಪದಲ್ಲಿ ಪಟ್ಟಣಕ್ಕೆ ಹೋಗುವುದುಂಟು. ಅಲ್ಲಿ ಹೋಟೆಲು, ಸಿನಿಮಾ ಎಂದು ಮಜ ಮಾಡುವುದುಂಟು. ಆದರೆ ಇವೆಲ್ಲವೂ ಗ್ರಾಮೀಣ ಮಹಿಳೆಯರಿಗೆ ಮಾತ್ರ ಸೊನ್ನೆ. ಕುಟುಂಬದ ಹೊರೆಯೊಂದಿಗೆ ಕುಟುಂಬವನ್ನು ಪೋಷಿಸುವ ಕೃಷಿಯ ಹೊರೆಯನ್ನೂ ಇವರೇ ಹೊರಬೇಕು. ಅದಕ್ಕಾಗಿ ಚಳಿಯನ್ನದೆ, ಮಳೆಯನ್ನದೆ ಉರಿ ಬಿಸಿಲಿನಲ್ಲಿ ಹೊಲ ಗದ್ದೆಗಳಲ್ಲಿ ತಮ್ಮ ಜೀವ ತೇಯಬೇಕು. ಅಂಜದೆ, ಅಳುಕದೆ ಎಂತಹ ಕಷ್ಟ ಕಾರ್ಪಣ್ಯಗಳನ್ನೂ ನಿಭಾಯಿಸಿಕೊಂಡು ಹೋಗಬೇಕು. ಇವರಿಗೆ ಜವಾಬ್ದಾರಿಗಳು ಅನೇಕ. ಮನೆಯನ್ನು ಒಪ್ಪಮಾಡಿ, ಮನೆಯ ಯೋಗ ಕ್ಷೇಮವನ್ನೂ ನೋಡಿಕೊಂಡು ಕೃಷಿ ಕೆಲಸಗಳಲ್ಲೂ ದುಡಿಯುವುದೆಂದರೆ ಸಾಮಾನ್ಯ ವಿಷಯವಲ್ಲ. ಈ ಮಧ್ಯೆ ಅವರ ವೈಯಕ್ತಿಕ ಆರೋಗ್ಯ ಭಾಗ್ಯಗಳಿಗೆ ತಿಲಾಂಜಲಿ. ಭಾರತದಲ್ಲಿ ಕೃಷಿಯಲ್ಲಿ ನಿರತರಾಗಿರುವ ಶೇಕಡ 70 ಮಂದಿಯಲ್ಲಿ ಅರ್ಧದಷ್ಟು ಹೆಂಗಸರೇ ಎಂದು ತಿಳಿದು ಬಂದಿದೆ. ಇವರೆಲ್ಲರ ಸ್ಥಿತಿಯೂ ಒಂದೇ. ಕೃಷಿ ಕಾರ್ಯಗಳ ಬಹುಪಾಲು ಭಾರ ಇವರ ತಲೆಯ ಮೇಲೆ. ಆದರೆ ಅದರ ಹೆಗ್ಗಳಿಕೆ ಮಾತ್ರ ಪುರುಷರಿಗೆ.

ಭಾರತದಲ್ಲಿರುವ ಸುಮಾರು 265 ದಶಲಕ್ಷ ಮಹಿಳೆಯರಲ್ಲಿ 32 ದಶಲಕ್ಷ ಮಹಿಳೆಯರು ಜೀವನದ ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಾರೆ. ಇದರಲ್ಲಿ ಮೂರು ಲಕ್ಷಕ್ಕೂ ಹೆಚ್ಚಿನ ಮಹಿಳೆಯರು ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿ ಕೆಲಸ ಮಾಡುತ್ತಿದ್ದು, ಉಳಿದವರು ಗ್ರಾಮೀಣ ಪ್ರದೇಶಗಳಲ್ಲಿ ದುಡಿಯುತ್ತಿದ್ದಾರೆ. ಇವರಲ್ಲಿ ಶೇಕಡ 73 ರಷ್ಟು ಮಹಿಳಾ ಕಾರ್ಮಿಕರು ತೋಟಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ನಗರ ಪ್ರದೇಶಗಳಲ್ಲಿ ದುಡಿಯುವ ಮಹಿಳೆಯರು ಅನಕ್ಷರಸ್ಥರು. ಇವರ ಪಾಲಿಗೆ ಯಾವ ಅನುಕೂಲಗಳೂ ಇಲ್ಲ. ಅದರಲ್ಲೂ ಕೃಷಿ ಕ್ಷೇತ್ರವಾದ ತೋಟಗಳಲ್ಲಿ ದುಡಿಯುವ ಮಹಿಳೆಯರ ಪಾಡಂತೂ ತೀರ ಕಷ್ಟಕರ. ಧೋ ಎಂದು ಸದಾ ಸುರಿಯುತ್ತಿರುವ ಮಳೆ, ಮೈ ಕೊರೆಯುವ ಚಳಿ, ರಕ್ತ ಹೀರುವ ಜಿಗಣೆಗಳು, ಸೊಳ್ಳೆಗಳು ಇವುಗಳ ನಡುವೆ ಇವರು ಬೆಳಗಿನಿಂದ ಸಂಜೆಯವರಗೆ ತಮ್ಮ ಹೊಟ್ಟೆ ಪಾಡಿಗಾಗಿ ಮೂಕ ಪಶುಗಳಂತೆ ದುಡಿಯಲೇ ಬೇಕು. ಯಜಮಾನನ ಮುಂದೆ ತಮ್ಮ ಕಷ್ಟಗಳನ್ನು ಹೇಳಿಕೊಳ್ಳುವುದಿರಲಿ, ದನಿ ತೆಗೆದು ಮಾತಾಡುವಂತಯೇ ಇಲ್ಲ. ಇದೊಂದು ವಿಷವರ್ತುಲವಿದ್ದಂತೆ. ಇದರಲ್ಲಿ ಸಿಲುಕಿಕೊಂಡವರು ತಪ್ಪಿಸಿಕೊಂಡು ಹೊರಬರುವಂತೆಯೇ ಇಲ್ಲ. ತೋಟಗಳಲ್ಲಿ ಕೆಲಸ ಮಾಡುವ ಮಹಿಳೆಯರಿಗೆ ವರ್ಷವಿಡೀ ಕೆಲಸವೂ ಇರುವುದಿಲ್ಲ. 'ಸುಗ್ಗಿಯ ಕಾಲ ಕಳೆದ ನಂತರ ನಾಟಿ ಹಾಕುವುದು, ಕಳೆ ಕೀಳುವುದು ಇತ್ಯಾದಿ ಸಣ್ಣ ಪುಟ್ಟ ಕೆಲಸಗಳು ಮುಗಿದ ಮೇಲೆ ಇವರಿಗೆ ಬೇಡಿಕೆ

ಇಲ್ಲ. ಹೊಟ್ಟೆಪಾಡಿಗಾಗಿ ಇವರು ದಿನಗೂಲಿಯ ಮೇಲೆ ಅಲ್ಲಿ ಇಲ್ಲಿ ದುಡಿಯಬೇಕು. ದಿನಗೂಲಿಯು ದೊರೆಯದಿದ್ದರೆ ಇವರ ಪಾಡು ನಾಯಿಗಿಂತಲೂ ಕಡೆ. ಹಸಿವಿನೊಡನೆ ಸೆಣೆಸಾಟ ನಡೆಸಲಾಗದ ಈಬೃಹತ್ ಕಾರ್ಮಿಕ ವೃಂದ ತುತ್ತಿನ ಚೀಲ ತುಂಬಿಸಿ ಕೊಳ್ಳಲು ನಗರ, ಪಟ್ಟಣ ಪ್ರದೇಶಗಳಿಗೆ ಕೆಲಸ ಹುಡುಕಿಕೊಂಡು ಬರುತ್ತಾರೆ. ಈ ಮಹಿಳಾ ಕಾರ್ಮಿಕರ ಬದುಕು ದಿನದಿನಕ್ಕೂ ಅಸಹನೀಯವಾಗುತ್ತಿದೆ. ಇವರಿಗೆ ಉದ್ಯೋಗದ ಭದ್ರತೆಯಿಲ್ಲ. ಕೈತುಂಬ ಕೂಲಿಯಿಲ್ಲ. ಒಳ್ಳೆಯ ವಾತಾವರಣ ವಿಲ್ಲ. ಆದರೆ ಮೈತುಂಬಾ ದುಡಿತವಿದೆ. ಒಪ್ಪೊತ್ತಿನ ಅನ್ನಕ್ಕಾಗಿ ಇವರು ಸತತವಾಗಿ ಹೋರಾಟ ನಡೆಸಿದ್ದಾರೆ. ಮೈಗೆ, ಮನಸ್ಸಿಗೆ ತಗಲುವ ರೋಗಗಳೊಂದಿಗೆ ಸೆಣಸು ತ್ತಿದ್ದಾರೆ. ಇವರ ಬವಣೆಗಳನ್ನು ಹೋಗಲಾಡಿಸಲು ಭಾರತದಲ್ಲಿ ಯಾವ ಪ್ರಯ ತ್ನವೂ ನಡೆಯದಿರುವುದು ದುರ್ದೈವ. ಇವರ ಕಷ್ಟವನ್ನು ಪರಿಹರಿಸುವ ಹೊಣೆ ಯನ್ನು ಹೊತ್ತಿರುವ ಸರಕಾರವೂ ಇವರ ಪಾಲಿಗೆ ಕಣ್ಣುಮುಚ್ಚಿ ಕುಳಿತಿದೆ.

ಪುರುಷ ಪ್ರಬಲ; ಹೆಣ್ಣು ಅಬಲೆ ಎಂದು ಹೇಳಲಾಗಿದೆ. ಆದರೆ ಕೃಷಿಯಲ್ಲಿ ಹೆಣ್ಣಿನ ದುಡಿಮೆಯ ಪರಿಯನ್ನು ನೋಡಿದಾಗ ಈ ಮಾತಿಗೆ ಅರ್ಥವಿಲ್ಲ ಎನಿಸು ತ್ತದೆ. ಹೆಣ್ಣಿಗೆ ದೇಹದಾರ್ಢ್ಯ ಇಲ್ಲದಿರಬಹುದು. ಆದರೆ ಅವಳಿಗಿರುವ ಮನೋ ದಾರ್ಢ್ಯ ಈ ಕೊರತೆಯನ್ನು ಮುಚ್ಚಿಬಿಡುತ್ತದೆ. ಈ ಮನೋದಾರ್ಢ್ಯದಿಂದಲೇ ಅವಳು ಪುರುಷನೊಂದಿಗೆ ಸರಿಸಮನಾಗಿ ದುಡಿಯುವುದು ಸಾಧ್ಯವಾಗಿದೆ. ಅವಳಿಗಿ ರುವ ಕಾರ್ಯ ದಕ್ಷತೆ, ತನ್ಮಯತೆ, ವಿಧೇಯತೆ ಹಾಗೂ ಧೈರ್ಯಸ್ಥೈರ್ಯಗಳು ವರ್ಣಿಸಲದಳ. ಕೃಷಿಯ ಆಧಾರ ಸ್ಥಂಭದಂತಿರುವ ಗ್ರಾಮೀಣ ಮಹಿಳೆಯರ ಬದುಕು ಒಂದು ಹೋರಾಟ. ಅವರ ಜೀವನ ನಿಜಕ್ಕೂ ದುರ್ಭರ. ಅಸಂಘಟಿತ ಕ್ಷೇತ್ರದಲ್ಲಿ ದುಡಿಯುವ ಇವರು ಸಮಾಜದಲ್ಲಿ ಅಲಕ್ಷಿಸಲ್ಪಟ್ಟಿದ್ದಾರೆ, ಶೋಷಿಸಲ್ಪಟ್ಟಿ ದ್ದಾರೆ ಎಂದರೆ ತಪ್ಪಾಗದು.

ಇಂದು ವಿಜ್ಞಾನದ ನೆರವಿನಿಂದ ಭಾರತದ ಅರ್ಥವ್ಯವಸ್ಥೆಯ ಬೆನ್ನಲಬಾದ ಕೃಷಿ ಬಹಳವಾಗಿ ಮುಂದುವರಿಯುತ್ತಿದೆ. ಜೀವನಾಧಾರ ಕೃಷಿ ವಾಣಿಜ್ಯ ಕೃಷಿಯಾಗಿ ಪರಿವರ್ತನೆಗೊಂಡಿದೆ. ಆಧುನಿಕ ಯಂತ್ರೋಪಕರಣಗಳು, ಸುಧಾರಿತ ಮಿಶ್ರ ತಳಿ ಗಳು, ಕೃಷಿಯನ್ನು ಪ್ರವೇಶಿಸಿ ದೇಶದಲ್ಲಿ ಹಸಿರುಕ್ರಾಂತಿ ಮೂಡಿದೆ. ಅಂತೆಯೇ ಕೃಷಿ ಕಲಿಕೆಯತ್ತ ವಾಲುತ್ತಿರುವ ಮಹಿಳೆಯರ ಸಂಖ್ಯೆಯೂ ಹೆಚ್ಚುತ್ತಿದೆ. ಮಹಿಳೆ ಕೃಷಿ ಕಾಲೇಜಿನಲ್ಲಿ ಕಲಿಯುವುದೆಂದರೆ ಮೂಗಿನ ಮೇಲೆ ಬೆರಳಿಡುವ ಕಾಲವೊಂ ದಿತ್ತು. ಆದರೆ ಇಂದು ಇದು ಸಾಮಾನ್ಯ ವಿಷಯವಾಗಿದೆ. ಕೃಷಿ ಕಾಲೇಜುಗ ಳಲ್ಲಿ ಮಹಿಳೆಯರು ಉಳುಮೆ, ನಾಟಿ, ವಿವಿಧ ಬಗೆಯ ಬೆಳೆಗಳನ್ನು ಬೆಳೆಯುವ

ವಿಧಾನಗಳು, ಬೆಳೆಗಳಿಗೆ ಬೀಳುವ ಕೀಟಗಳು ಮತ್ತು ರೋಗಗಳು, ಅವುಗಳಿಗೆ ಪರಿಹಾರೋಪಾಯಗಳು, ಮಣ್ಣಿನ ಪರೀಕ್ಷೆ, ಹಳ್ಳಿಗಳಿಗೆ ಹೋಗಿ ಬೆಳೆಗಳ ಬಗ್ಗೆ ವಿಸ್ತರಣಾ ಕೆಲಸ ಹೀಗೆ ಪ್ರತಿಯೊಂದನ್ನೂ ಕಲಿಯುತ್ತಿದ್ದಾರೆ. ಪದವಿ ಪಡೆದ ಮಹಿಳೆಯರು ಕೃಷಿ ಅಧಿಕಾರಿಗಳಾಗಿ, ಕೃಷಿ ವಿಸ್ತರಣಾಧಿಕಾರಿಗಳಾಗಿ, ಸಂಶೋಧಕರಾಗಿ, ತಾಂತ್ರಿಕ ಸಲಹೆಗಾರರಾಗಿ, ಕೃಷಿಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಮಹಿಳೆಯರು ಕೇವಲ ಮಕ್ಕಳ ಆರೋಗ್ಯ ಪರಿಪಾಲನೆ ಮತ್ತು ಗೃಹಕೃತ್ಯಗಳಿಗಷ್ಟೇ ಸೀಮಿತವಾಗಿರಬೇಕೆಂಬ ಸಂಪ್ರದಾಯಬದ್ಧ ಮನೋಭಾವನೆ ಇಂದು ಕಡಿಮೆಯಾಗುತ್ತಿದೆ. ಮಾನವ ಶಕ್ತಿಯ ಸದುಪಯೋಗದ ನಿಟ್ಟಿನಲ್ಲಿ ಮಹಿಳೆಯರು ಸಾಗುತ್ತಿದ್ದಾರೆ. ಆರ್ಥಿಕ ರಂಗದ ಎಲ್ಲ ಕ್ಷೇತ್ರಗಳಲ್ಲೂ ಪುರುಷರಿಗೆ ಸರಿ ಸಾಟಿಯಾಗಿ ದುಡಿಯುತ್ತಿದ್ದು ಜೀವನ ಮಟ್ಟವನ್ನು ಹೆಚ್ಚಿಸಿಕೊಳ್ಳುತ್ತಿದ್ದಾರೆ. ಆದರೆ ಮಹಿಳಾ ವರ್ಗದ ಇನ್ನೊಂದು ಮುಖವಾದ ಮಹಿಳಾ ಕೃಷಿ ಕಾರ್ಮಿಕರು ದಿನ ದಿನಕ್ಕೂ ನವೆಯುತ್ತಿದ್ದಾರೆ. ಅಂತರರಾಷ್ಟ್ರೀಯ ಮಹಿಳಾ ವರ್ಷ ಈ ವರ್ಗದ ಮೇಲೆ ಯಾವ ಪ್ರಭಾವವನ್ನೂ ಬೀರಿಲ್ಲ. ಸಂಘಟಿತ ಕ್ಷೇತ್ರದಲ್ಲಿ ದುಡಿಯುವ ಮಹಿಳೆಯರಿಗೆ ದೊರೆಯುವ ಸೌಲಭ್ಯಗಳಿಂದ ಈ ವರ್ಗದವರು ವಂಚಿತರಾಗಿದ್ದಾರೆ. ಬೌದ್ಧಿಕವಾಗಿಯಂತೂ ಇವರು ಬಹಳ ಹಿಂದುಳಿದಿದ್ದಾರೆ. ಅಂದರೆ ಊಟ ಕಂಬಳಿ ಹೊದಿಕೆ ಇದೇ ಇವರ ಬಾಳು. ನಿಜವಾದ ಸ್ವಾತಂತ್ರ್ಯದ ಅರಿವು, ಮಾನಸಿಕ ನೆಮ್ಮದಿ ಇವರಿಗಿಲ್ಲ. ಇಂದು ಎಲ್ಲೆಲ್ಲೂ ಮಹಿಳಾ ಸ್ವಾತಂತ್ರ್ಯದ ಕೂಗು ಕೇಳಿ ಬರುತ್ತಿದೆ. ನಮ್ಮ ದೇಶದಲ್ಲಿ 300 ಕ್ಕೂ ಹೆಚ್ಚು ಮಹಿಳಾ ಕಲ್ಯಾಣ ಸಂಘಗಳಿವೆ. ಆದರೂ ಈ ದುರ್ದೈವಿ ಮಹಿಳಾ ಕೃಷಿ ಕಾರ್ಮಿಕರ ಸ್ಥಿತಿಯಲ್ಲಿ ಯಾವ ಮಾರ್ಪಾಡು ಕಂಡು ಬಂದಿಲ್ಲ. ದಾರಿದ್ರ್ಯ, ಅರೆ ಆರೋಗ್ಯ, ನಿಕೃಷ್ಟ ಜೀವನ ಸೌಲಭ್ಯಗಳು, ಕೆಳಮಟ್ಟದ ಜೀವನಸ್ಥಿತಿ, ಶಿಕ್ಷಣದ ಕೊರತೆ ಇವರನ್ನು ಕಾಡುತ್ತಿವೆ. ಇಂದು ಭಾರತ ಕೃಷಿ ಕ್ಷೇತ್ರದಲ್ಲಿ ಗಣನೀಯವಾದ ಬೆಳವಣಿಗೆ ಸಾಧಿಸಿದೆ. ಇದರಲ್ಲಿ ಮಹಿಳಾ ಕೃಷಿ ಕಾರ್ಮಿಕರ ಕೊಡುಗೆ ಅಪಾರ ಹಾಗೂ ವೈಶಿಷ್ಟ್ಯಪೂರ್ಣ ಕುಟುಂಬಕ್ಕೆ ಹಾಗೂ ದೇಶಕೆ ಸಾರ್ವತ್ರಿಕವಾಗಿ ದುಡಿದು ಸೇವೆ ಸಲ್ಲಿಸುವ ಕಾರ್ಯ ಅಮೋಘ. ಇವರ ಉದ್ಧಾರವಾಗದ ಹೊರತು ದೇಶದ ಉದ್ಧಾರ ಅಸಾಧ್ಯ. ಇವರ ಸಂಕಷ್ಟಗಳು ಕೊನೆಗೊಂಡು ದುರಂತಮಯ ಜೀವನ ಪರಿಸ್ಥಿತಿಯಲ್ಲಿ ಸುಧಾರಣೆ ತರಲು ಸರಕಾರ ಇವರತ್ತ ಹೆಚ್ಚಿನ ಗಮನ ಹರಿಸಬೇಕಾಗಿದೆ. ಊಟ ವಸತಿಗೆ ಬೇಕಾದ ಕನಿಷ್ಠ ಸೌಲಭ್ಯಗಳನ್ನು ಇವರಿಗೆ ಪೂರ್ಣಗೊಳಿಸಬೇಕಾಗಿದೆ. ಮಹಿಳಾ ಕೃಷಿ ಕಾರ್ಮಿಕ ಜನಾಂಗದ ಆರ್ಥಿಕ ಹಾಗೂ ಸಾಮಾಜಿಕ ಅಭಿವೃದ್ಧಿಗಾಗಿ ಯೋಜನಾ ರೂಪರೇಖೆಗಳನ್ನು ಈ ದಿಕ್ಕಿನಲ್ಲಿ ರೂಪಿಸಬೇಕಾಗಿದೆ.

# ಜೈನ ದರ್ಶನ

—ಡಾ॥ ಎಂ. ಡಿ. ವಸಂತರಾಜ್

ಮನುಷ್ಯನು ತನ್ನ ಸುಖ ದುಃಖಗಳ ಮೂಲ ಕಾರಣಗಳನ್ನು ವಿಶ್ಲೇಷಿಸಿ ತಿಳಿಯಲು ಬಹು ಪ್ರಾಚೀನ ಕಾಲದಿಂದಲೂ ಯತ್ನಿಸಿದ್ದಾನೆ. ಈ ಯತ್ನದ ಫಲ ರೂಪದಿಂದ ಉದಯಿಸಿ ಉಳಿದು ಬೆಳೆದು ಬಂದ ವಿಚಾರಗಳಲ್ಲಿ 'ದರ್ಶನ'ವು ಒಂದು ಇಂತಹ ದಾರ್ಶನಿಕ ಚಿಂತನೆಯ ಬಹು ಪುರಾತನ ಸಾಹಿತ್ಯವು ಭಾರತದೇಶದ ಉಜ್ವಲಸಂಸ್ಕೃತಿಯ ಸಾಕ್ಷಿಗಳಲ್ಲೊಂದಾಗಿ ಉಳಿದು ಬಂದಿದೆ. ಭಾರತೀಯ ದಾರ್ಶನಿಕಚಿಂತನೆಯನ್ನು ಪ್ರಧಾನವಾಗಿ ವೈದಿಕ ಮತ್ತು ಅವೈದಿಕ ಎಂದು ಎರಡು ವಿಭಾಗ ಮಾಡಿದ್ದಾರೆ. ವೇದಗಳ ಪ್ರಾಮಾಣ್ಯ-ಪಾರಮ್ಯವನ್ನು ಅಂಗೀಕರಿಸಿದಿರುವ ದರ್ಶನಗಳು ವೈದಿಕ ದರ್ಶನಗಳು. ವೇದಪ್ರಾಮಾಣ್ಯ–ಪಾರಮ್ಯವನ್ನು ಅಂಗೀಕರಿಸದಿರುವ ದರ್ಶನಗಳು ಅವೈದಿಕ ದರ್ಶನಗಳು. ವೈದಿಕ ಮತ್ತು ಅವೈದಿಕ ಎಂಬ ಹೆಸರುಗಳ ಬದಲಾಗಿ ಆಸ್ತಿಕ ಮತ್ತು ನಾಸ್ತಿಕ ಎಂಬ ಹೆಸರುಗಳ ಬಳಕೆಯಿರುವುದಾದರೂ ಲಾಕ್ಷಣಿಕ ಅನ್ವರ್ಥತೆಯ ಅಪೇಕ್ಷೆಯಿಂದ ಈ ಹೆಸರುಗಳು ಸಂಗತವಾಗುವುದಿಲ್ಲ. ಆದ್ದರಿಂದ 'ನಾಸ್ತಿಕ' ಎಂಬುದು ಕೇವಲ ಅಧಿಕ್ಷೇಪಾರ್ಥದಿಂದ ಪ್ರಯುಕ್ತವಾಗಿದೆ ಎಂದು ಹೇಳಬಹುದು. ಅವೈದಿಕ ದರ್ಶನದಲ್ಲಿ ಈಗ ಕಂಡುಬರುವಂತೆ ಪ್ರಧಾನವಾಗಿ ಜೈನ, ಬೌದ್ಧ ಮತ್ತು ಚಾರ್ವಾಕ ಎಂಬ ಮೂರು ವಿಭಾಗಗಳಿವೆ. ಇವುಗಳಲ್ಲಿ ಚಾರ್ವಾಕ ಪಂಥವು ಅವೈದಿಕವೆಂದೆನಿಸಿಕೊಂಡಿರುವುದಾದರೂ ಅದರ ಪ್ರತಿರೋಧಿಯಾಗಿ ಆ ಮತ ಪಂಥದಿಂದಲೇ ಒಡಮೂಡಿ ಸಿಡಿದುನಿಂತ ದಾರ್ಶನಿಕ ಚಿಂತನೆಯಾಗಿದೆಯೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದಾರೆ. ಹೀಗೆಯೇ ಜೈನ ಮತ್ತು ಬೌದ್ಧದಾರ್ಶನಿಕ ಚಿಂತನೆಗಳೂ ಮೌಲಿಕವಾಗಿ ವೈದಿಕ ಪಂಥದಿಂದಲೇ ಹೊರ ಹೊಮ್ಮಿ ಸ್ವತಂತ್ರರೂಪ ತಳೆದುವೆಂಬ ವೈದಿಕಮತಾಭಿಮಾನಿಗಳಾದ ಕೆಲವರು ವಿದ್ವಾಂಸರ ಅಭಿಪ್ರಾಯವಿದೆ. ಆದರೆ ಇದರ ವಿರುದ್ಧವಾಗಿ, ವೈದಿಕ ಮತ ಪಂಥವು ಭಾರತ ದೇಶದಲ್ಲಿ ಅವತರಣವಾಗಿ ಪ್ರಸರಣ ಹೊಂದುವ ಮುನ್ನವೇ ಇಲ್ಲಿ ಸಂನ್ಯಾಸಾಶ್ರಮದ ಪಾರಮ್ಯವುಳ್ಳದ್ದಾಗಿದ್ದ ಧರ್ಮ ಪಂಥಗಳಿದ್ದುವೆಂದು ಮತ್ತು ಇವುಗಳನ್ನು ಶ್ರಮಣ ಪಂಥದ ಧರ್ಮಗಳೆಂದು ಕರೆಯಲಾಗುತ್ತಿದ್ದಿತೆಂದೂ ಕೆಲವರು

ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.[1] ಪರಂಪರಾಗತ ಪ್ರಾಚೀನ ಹೇಳಿಕೆಯೊಂದರನುಗುಣವಾಗಿ ನಿರ್ಗ್ರಂಥ, ಶಾಕ್ಯ, ತಾಪಸ, ಗೇರುಯ ಮತ್ತು ಆಜೀವ ಎಂಬ ಐದು ಪಂಥಗಳು ಶ್ರವಣಧರ್ಮ ಪಂಥದ ಶಾಖೆಗಳೆಂದು ಗಣನೆಹೊಂದಿವೆ.[2] ಭಾರತ ದೇಶದಲ್ಲಿ ವೈದಿಕಧರ್ಮಪಂಥದ ಅವತರಣ ಮತ್ತು ಪ್ರಸರಣವಾಗುವ ಮುನ್ನವೇ ಶೈವ ಧರ್ಮಪಂಥವು ಇಲ್ಲಿ ಅಸ್ತಿತ್ವದಲ್ಲಿದ್ದಿತೆಂಬ ಅಭಿಮತವು ಪ್ರಾಯಿಕವಾಗಿ ಎಲ್ಲಾ ವಿದ್ವಾಂಸರಿಂದ ಅಂಗೀಕೃತವಾದುದಾಗಿದೆ ಪ್ರಾಚೀನವಾದ ಈ ಶೈವಧರ್ಮ ಪಂಥವು ಶ್ರಮಣ ಧರ್ಮಪಂಥಗಳಲ್ಲೊಂದಾಗಿ ಪರಿಗಣನೆ ಹೊಂದಿರುವುದು ಹೇಗೆ? ಎಂಬುದು ವಿಮರ್ಶೆಯ ಸಂಗತಿಯಾಗಿದೆ. ಆದರೆ ಶೈವಧರ್ಮಪಂಥದ ಪರಮಾರಾಧ್ಯ ದೇವನಾದ ಶಿವನನ್ನು ಕುರಿತು ಪೌರಾಣಿಕ ಕಥನಾಂಶಗಳು ಹಾಗೂ ಜೈನ ಧರ್ಮ ಪಂಥದ ಪ್ರಥಮತೀರ್ಥಂಕರನಾದ ವೃಷಭನಾಥನನ್ನು ಕುರಿತ ಅನೇಕ ಪೌರಾಣಿಕ ಕಥನಾಂಶಗಳು ಸಮಾನಾಂತರವಾಗಿವೆ.[3] ಶಿವನಿಂದಾದ ತ್ರಿಪುರದಹನದ ಪೌರಾಣಿಕ ಸಂಗತಿಯು ಜನ್ಮ-ಜರಾ–ಮರಣ ರೂಪದ ನಗರ ತ್ರಯದಹನ ರೂಪದ ಆಧ್ಯಾತ್ಮಿಕ ಅರ್ಥದೊಡನೆ ಜೈನಸಂಪ್ರದಾಯದಲ್ಲಿ ಸಿದ್ಧಪರಮಾತ್ಮನ ಸ್ತುತಿಯಾಗಿ ಬಹಳ ಪ್ರಾಚೀನಕಾಲದಿಂದಲೂ ಉಳಿದುಬಂದಿದೆ.[4] ಈ ಪ್ರಕಾರದ ಎಲ್ಲ ಅಂಶಗಳನ್ನು ಗಮನದಲ್ಲಿರಿಸಿ ಪರ್ಯಾಲೋಚಿಸಿದಲ್ಲಿ ಶೈವ ಮತ್ತು ಜೈನ ಧರ್ಮಪಂಥಗಳು ಮೂಲತಃ ಏಕೈಕ ಸ್ರೋತಸ್ಸಿನಿಂದ ಮೂಡಿ ಕವಲೊಡೆದು ಭಿನ್ನಧಾರೆಗಳಾಗಿ ಹರಿದು ಬಂದಿವೆಯೆಂದು ಹೇಳಬಹುದು. ಒಂದು ವಸ್ತುವಿನ ಸ್ವರೂಪವನ್ನು ತಿಳಿಯಲು ಅದರ ಪೂರ್ವಾಪಾರ ಸನ್ನಿವೇಶ ಮತ್ತು ಪರಿಸರಗಳ ಪರಿಚಯವು ವಿಶೇಷ ರೀತಿಯಿಂದ ಸಹಾಯಕವಾಗುವುದು. ಇದರಂತೆ ಜೈನದಾರ್ಶನಿಕ ಚಿಂತನೆಯು ವೈದಿಕ ಮತಾವತರಣದಿಂದ ಪೂರ್ವಕಾಲೀನವಾದುದು, ಶ್ರಮಣಪಂಥದ ಒಂದು ಶಾಖೆಯಾಗಿದೆ. ಮತ್ತು ಶೈವಧರ್ಮಪಂಥದೊಡನೆ ಸಾಹೋದರ್ಯಸಂಬಂಧವುಳ್ಳದ್ದಾಗಿದೆ; ಎಂಬಿವೇ ಮುಂತಾದ ಚಾರಿತ್ರಿಕ ಹಿನ್ನೆಲೆಯನ್ನು ಗಮನದಲ್ಲಿರಿಸಿ ಪರಿಶೀಲಿಸಿದಲ್ಲಿ ವಿಚಾರ ಮಂಥನದಲ್ಲಿ ವಿಶಿಷ್ಟಸಾರ್ಥಕತೆಯುಳ್ಳದ್ದಾಗುವುದು.

ಭಾರತೀಯ ದಾರ್ಶನಿಕ ಚಿಂತನೆಗಳನ್ನು ಸಿದ್ಧಾಂತಗಳೆಂದು ಹೆಸರಿಸುವ ರೂಢಿಯಿದೆ. ಭಾರತೀಯರ ದೃಷ್ಟಿಯಲ್ಲಿ ದಾರ್ಶನಿಕ ಚಿಂತನೆ ಅಥವಾ ಸಿದ್ಧಾಂತವು

---

1 ಆ. ನೇ. ಉಪಾಧ್ಯೆ ಸಂಪಾದಿತ 'ವಚನ ಸಾರ' ಉಪೋದ್ಘಾತಃ ಪು. ೪೩-೯೨.

2 ಇದೇ ಗ್ರಂಥ ಪು. ಸಂ. ೮೪. ಅ. ೬. ೧ 'ಸಿಗ್ಗಂಠ - ಸಕ್ಕ - ತಾವಸ - ಗೇರುಯ ಆಜೀವ ಪಂಚಹಾ ಸಮಣಾ'

3 'ವಾಯ್ಸ್ ಆಫ್ ಅಹಿಂಸಾ' — ಋಷಭ ವಿಶೇಷಾಂಕ.

4 ಜೇಹಿಂ ಝಾಣಗ್ಗಿ ಬಾಣೇಹಿಂಅ ಇಪಡ್ಢಯಂ ಜಮ್ಮ ಜರಮರಣಯರತ್ತಯಂ ದಡ್ಢಯಂ।
ಜೇಹಿ ಪತ್ತಂ ಶಿವಂ ಸಾಸಯಂ ಠಾಣಯಂ ತೇ ಮಹಂ ದಿಂತು ಸಿದ್ಧಾವರಂಣಾಣಯಂ।

ಕೇವಲ ಒಂದು ಚಿಂತನೆ ಅಥವಾ ವಿಚಾರ ಮಾತ್ರವಲ್ಲ; ಅದು ಮಾನವ ಜೀವನದ ನಡೆ ನುಡಿ ಆಚಾರ ವ್ಯವಹಾರಗಳ ತಳಹದಿಯಾಗಿದೆ. ಸಾರಾಂಶತಃ ಹೇಳುವುದಾದರೆ ವಸ್ತುಸ್ವರೂಪದ ತಾತ್ವಿಕಚಿಂತನೆಯು ಸಿದ್ಧಾಂತದ ಆತ್ಮವಾಗಿದೆ. ಆಚಾರವು ಅದರ ಶರೀರವಾಗಿದೆ. ಈ ರೀತಿಯಿಂದ ಭಾರತೀಯ ದಾರ್ಶನಿಕ ಸಿದ್ಧಾಂತದಲ್ಲಿ ವಿಶ್ವಸ್ವರೂಪದ ತಾತ್ವಿಕ ವಿಚಾರ ಮಾತ್ರವಲ್ಲದೆ ಮಾನವನ ಬದುಕಿನ ಮಾರ್ಗ ದರ್ಶನವೂ ಅಂತರ್ಗತವಾಗಿದೆ.

ಜೈನಸಿದ್ಧಾಂತದಲ್ಲಿ ವಿಶ್ವದ ಸ್ವರೂಪವನ್ನು ನವಪದಾರ್ಥ ಅಥವಾ ಸಪ್ತತತ್ತ್ವಗಳ ರೂಪದಿಂದ ಪ್ರತಿಪಾದನೆ ಮಾಡಿದೆ. ನವಪದಾರ್ಥ ಮತ್ತು ಸಪ್ತತತ್ವಗಳ ನಡುವೆ ಸಂಖ್ಯಾಪೇಕ್ಷೆಯಿಂದ ಭೇದವಿದೆಯೇ ಹೊರತಾಗಿ ಅರ್ಥಾಪೇಕ್ಷೆಯಿಂದ ಭೇದವಿಲ್ಲ. ಜೀವ, ಅಜೀವ, ಪುಣ್ಯ, ಪಾಪ, ಬಂಧ, ಸಂವರ, ನಿರ್ಜರಾ ಮತ್ತು ಮೋಕ್ಷ-ಇವು ನವಪದಾರ್ಥಗಳು. ಇವುಗಳಲ್ಲಿ ಪುಣ್ಯ ಮತ್ತು ಪಾಪಗಳು ಆಸ್ರವ ಮತ್ತು ಬಂಧಗಳ ಪ್ರಕಾರಮಾತ್ರಗಳಾಗಿವೆ. ಆದ್ದರಿಂದ ಪುಣ್ಯಾಸ್ರವ, ಪಾಪಾಸ್ರವ ಮತ್ತು ಪುಣ್ಯಬಂಧ, ಪಾಪಬಂಧ-ಎಂಬುದಾಗಿ ಪುಣ್ಯ ಮತ್ತು ಪಾಪಗಳು ಆಸ್ರವ ಮತ್ತು ಬಂಧಪದಾರ್ಥಗಳಲ್ಲಿಯೇ ಅಂತರ್ಗತವಾಗುವುವು.[5] ಹೀಗೆ ಈ ಪುಣ್ಯ ಮತ್ತು ಪಾಪಗಳ ಹೊರತಾದ ಮಿಕ್ಕ ಜೀವ, ಅಜೀವ, ಅಸ್ರವ, ಬಂಧ, ಸಂವರ, ನಿರ್ಜರಾ ಮತ್ತು ಮೋಕ್ಷಗಳು ಸಪ್ತತತ್ವ ಎಂಬ ಹೆಸರಿನಿಂದ ವ್ಯವಹೃತವಾಗಿದೆ. ಇವುಗಳಲ್ಲಿ ಕೊನೆಯ ಅಸ್ರವಾದಿ ಐದು ತತ್ವಗಳು ಮೊದಲಿನೆರಡು ತತ್ವಗಳಾದ ಜೀವ ಮತ್ತು ಅಜೀವಗಳ ಸಂಬಂಧ ಜನ್ಯವಾದ ಕಾರ್ಯಭಾವ ಮಾತ್ರಗಳಾಗಿವೆಯಲ್ಲದೆ ದ್ರವ್ಯ ರೂಪದಿಂದ ಸ್ವತಂತ್ರವಾದ ಅಸ್ತಿತ್ವವಾಗಿಲ್ಲ. ಜೀವ ಮತ್ತು ಅಜೀವಗಳು ಮಾತ್ರ ದ್ರವ್ಯಾತ್ಮಕವಾದ ಸ್ವತಂತ್ರ ಅಸ್ತಿತ್ವವುಳ್ಳದ್ದಾಗಿದ್ದು 'ದ್ರವ್ಯ' ಎಂಬ ಹೆಸರಿನಿಂದಲೂ ವರ್ಗೀಕರಣ ಹೊಂದಿವೆ. ಗುಣ ಮತ್ತು ಪರ್ಯಾಯಗಳುಳ್ಳದ್ದು ದ್ರವ್ಯ.[6] ಪರ್ಯಾಯವೆಂದರೆ ವಸ್ತುವಿನ ಅವಸ್ಥಾಂತರ, ವಸ್ತುವಿನ ಯಾವ ಅವಸ್ಥಾಂತರ ಅಥವಾ ಪರ್ಯಾಯಗಳಲ್ಲಿಯೂ ಅವಿರಹಿತವಾಗಿ ನಿರಂತರವಾಗಿ ವಸ್ತುವಿನ ಸಂಗತವಾಗಿರುವ ಧರ್ಮವು ಗುಣ. ಉದಾಹರಣೆಯಾಗಿ ಒಬ್ಬನೇ ಜೀವನು ದೇವ, ಮಾನವ, ತಿರ್ಯಂಚ, ನಾರಕಿ ಎಂಬ ಅವಸ್ಥಾಂತರಗಳನ್ನು ಹೊಂದುವನು. ಈ

---

5 'ಇಹ ಪುಣ್ಯಪಾಪಗ್ರಹಣಂ ಚ ಕರ್ತವ್ಯಂ, ನವಪದಾರ್ಥಾ . ಇತ್ಯನ್ಯೈರುಕ್ತತ್ವಾತ್ ನ ಕರ್ತವ್ಯಮ್ ತಯೋರಾಸ್ರವೇ ಬಂಧೇಚಾಂತರ್ಭಾವಾತ್'— ಸರ್ವಾರ್ಥಸಿದ್ಧಿ ಪ್ರಥಮೋಧ್ಯಾಯ :— ಚತುರ್ಥಸೂತ್ರವ್ಯಾಖ್ಯಾನಂ.

6 ಜೀವಮಜೀವಂ ದವ್ವಂ - ದ್ರವ್ಯ ಸಂಗ್ರಹ, ಗಾಹೆ ೧
ದವ್ವಂ ಜೀವಮಜೀವಂ ಜೀವೋ ಪುಣ ಚೇದಣೋವ ಜೋಗಮು ।
ಪೊಗ್ಗಲದವ್ವಪ್ಪಮುಹಂ ಅಚೆದಣಂ ಹವದಿ ಅಜ್ಜೀವಂ ॥35॥ ಪ್ರವಚನ ಸಾರ, ಅ.೩,

ಅವಸ್ಥಾಂತರಗಳು ಆ ಜೀವನ ಪರ್ಯಾಯಗಳು.[7] ಆದರೆ ಯಾವ ಜೀವನೇ ಆಗಿರಲಿ, ಯಾವ ಪರ್ಯಾಯದಲ್ಲಿಯೇ ಇರಲಿ, ಅವನಲ್ಲಿ ಚೇತನ ಧರ್ಮವು ಅವಿರಹಿತವಾಗಿ ನಿರಂತರವಾಗಿ ಇದ್ದೇ ಇರುವುದು. ಈ ಚೇತನವು ಜೀವನ ಗುಣ. ಈ ರೀತಿಯಾಗಿ ದ್ರವ್ಯ ವರ್ಗಕ್ಕೆ ಸೇರಿದ ಎಲ್ಲ ವಸ್ತುಗಳೂ ಗುಣ ಮತ್ತು ಪರ್ಯಾಯಗಳುಳ್ಳವಾಗಿರುತ್ತವೆ. ದ್ರವ್ಯದ ಲಕ್ಷಣವನ್ನು ಮತ್ತೊಂದು ರೀತಿಯಿಂದ 'ಸತ್' ಎಂಬುದಾಗಿ ಹೇಳಿದ್ದಾರೆ.[8] 'ಸತ್' ಎಂದರೆ ಉತ್ಪಾದ, ವ್ಯಯ ಮತ್ತು ಧ್ರುವತ್ವವುಳ್ಳದ್ದು.[9] ಒಂದು ಅವಸ್ಥೆ ಹೋಗಿ ಮತ್ತೊಂದು ಅವಸ್ಥೆ ಬರುವುದು ಉತ್ಪಾದ. ಹಿಂದಿನ ಅವಸ್ಥೆ ಕಳೆದು ಹೋಗುವುದು ವ್ಯಯ, ಈ ಎರಡು ಅವಸ್ಥಾಂತರಗಳಿಗೂ ಆಧಾರವಾಗಿ ಅವಿನಾಶಿಯಾಗಿರುವ ವಸ್ತುಭಾವ ಧ್ರುವತ್ವ. ಉದಾಹರಣೆಯಾಗಿ ಒಬ್ಬ ಜೀವನು ಮನುಷ್ಯ ಪರ್ಯಾಯದಲ್ಲಿರುತ್ತಾನೆ. ಆಯುಷ್ಯಾವಸಾನದಲ್ಲಿ ಮನುಷ್ಯ ಪರ್ಯಾಯದ ವ್ಯಯವಾಗಿ ಜೀವ ಪರ್ಯಾಯದ ಉತ್ಪಾದವಾಗಬಹುದು. ಆದರೆ ಈ ವ್ಯಯ ಮತ್ತು ಉತ್ಪಾದಗಳು ಜೀವನದಲ್ಲಿ ಆಗಿವೆ. ಈ ಅವಸ್ಥಾಂತರಗಳಲ್ಲಿ ಜೀವನು ಧ್ರುವತ್ವವುಳ್ಳವನಾಗಿರುತ್ತಾನೆ, ಎಂದರೆ ಜೀವಭಾವದಿಂದ ಅವನ ನಾಶವಾಗಲಿ ಉತ್ಪತ್ತಿಯಾಗಲಿ ಆಗಿರುವುದಿಲ್ಲ. ಎಲ್ಲ ಅವಸ್ಥಾಂತರಗಳಲ್ಲಿಯೂ ಜೀವನು ಧ್ರುವವಾಗಿರುತ್ತಾನೆ. ಹೀಗೆಯೇ ನಾನಾ ಪ್ರಕಾರದ ಆವರಣ ಪ್ರಕಾರಗಳು ಮತ್ತು ಆ ಪ್ರಕಾರಗಳಲ್ಲಿ ಸಾತತ್ಯದಿಂದಿರುವ ಚಿನ್ನವನ್ನು ಉತ್ಪಾದ, ವ್ಯಯ ಮತ್ತು ಧ್ರುವತ್ವಗಳಿಗೆ ಉದಾಹರಣೆಯಾಗಿ ಕಾಣಬಹುದು ಇದರಿಂದ ಜೈನ ತಾತ್ವಿಕ ಚಿಂತನೆಯನುಗುಣವಾಗಿ 'ಸತ್' ಎಂಬುದು ನಿತ್ಯಾನಿತ್ಯಾತ್ಮಕವಾಗಿದೆ; ಧ್ರುವತ್ವದ ಅಪೇಕ್ಷೆಯಿಂದ ನಿತ್ಯವಾಗಿದೆ; ಮತ್ತು ಪರ್ಯಾಯಗಳ ಅಪೇಕ್ಷೆಯಿಂದ ಅನಿತ್ಯವಾಗಿದೆ. ಹೀಗೆ 'ಸತ್ ದ್ರವ್ಯ ಲಕ್ಷಣಂ' ಎಂಬ ಪ್ರಕಾರದ ಲಕ್ಷಣ ಕಥನದಲ್ಲಿಯೂ ಫಲಿತಾಂಶದಿಂದ 'ಗುಣ ಪರ್ಯಾಯವತ್ ದ್ರವ್ಯಂ' ಎಂಬ ಲಕ್ಷಣಾರ್ಥವೇ ಸಂಗತವಾಗಿದೆ. ( ಮುಂದವರಿದುದು )

---

7 ಗುಣ ಪರ್ಯಾಯವತ್ ದ್ರವ್ಯವರ್—ತತ್ತ್ವಾರ್ಥಸೂತ್ರ - ಅಧ್ಯಾಯ 5. ಸೂತ್ರ - 38.
8 ಣರಣಾರಯ ತಿರಿಯಸುರಾ ಸಂತಾಣಾದೀಹಿಂ ಅಣ್ಣಹಾ ಚಾದಾ ।
ಪಚ್ಚಾಯಾ ಜೀವಾಣಾಂ ಉದಯಾದೀಹಿಂ ಸೌಮುಕಮುಸ್ಮಾಸ್ಸ ॥61॥ ಇದೇ ಪ್ರ. ಅ. ೩.
9 ಸತ್ ದ್ರವ್ಯ — ಲಕ್ಷಣಂ — ತತ್ತ್ವಾರ್ಥಸೂತ್ರ. ಅಧ್ಯಾಯ - 5. ಸೂ - 29.

---

**ವಿದ್ಯೆ ಕಡಿಮೆಯಾದರೂ ನಡತೆ ಶುದ್ಧವಾಗಿರಬೇಕು. ಕೇವಲ ಬುದ್ಧಿ ಶಕ್ತಿಯ ಬೆಳವಣಿಗೆಯೇ ಪರಿಪೂರ್ಣ ಮಾನವನ ಲಕ್ಷಣವಲ್ಲ.**

—ಶ್ರೀ ವಾಣಿ

# ಶೂನ್ಯ ಸಂಪಾದನೆ: ಅದೊಂದು ಮೋಸದ ಕೃತಿ.... ಒಂದು ವಿವೇಚನೆ

—ಎಸ್. ಎಸ್. ಭೂಸರೆಡ್ಡಿ.

ಹನ್ನೆರಡನೆಯ ಶತಮಾನದಲ್ಲಿ ನಡೆದುಹೋದ ಶಿವಶರಣರ ಅಪೂರ್ವಕ್ರಾಂತಿ ಸರ್ವದೃಷ್ಟಿಯಿಂದಲೂ ಅವಿಸ್ಮರಣೀಯ, ಚಿರಸ್ಮರಣೀಯ. ಭಾರತದ ಧಾರ್ಮಿಕ ಇತಿಹಾಸದಲ್ಲಿಯೇ ಒಂದು ಸುವರ್ಣಮಯ ಅಧ್ಯಾಯ. ಜೀವನದ ಚಿರಂತನ ಮೌಲ್ಯಗಳ ಬಗೆಗೆ ವಿನೂತನ ವಿಚಾರಧಾರೆ ಹರಿಯಿತು. ಈ ಕ್ರಾಂತಿಯ ಚಿಂತನ....ಮಂಥನದಿಂದ ಉದ್ಭವಿಸಿಬಂದ ಅಮೂಲ್ಯ, ಅಮೋಘ ವಚನಗಳು ಕನ್ನಡ ಸಾಹಿತ್ಯ ಪ್ರಪಂಚದ ಅದ್ವಿತೀಯ ರತ್ನಗಳು. ಶರಣ-ಶರಣೆಯರ ಕ್ರಾಂತಿಕಾರಕ ಮನದಿಂದ ಉಕ್ಕಿಬಂದ ಅನುಭವದ-ಅನುಭಾವದ ರಸಗಟ್ಟಿಗಳು. ಸ್ವಯಂಸ್ಫೂರ್ತಿಯಿಂದ ಸೆಲೆಯೊಡೆದು ಹೊರಹೊಮ್ಮಿ ಬಂದ ಈ ವಚನಗಳು ವಿಶ್ವಸಾಹಿತ್ಯದಲ್ಲಿ ಒಂದು ವಿಶಿಷ್ಟಸ್ಥಾನ ಪಡೆದು ಕನ್ನಡ ಸಾಹಿತ್ಯವನ್ನು ಬೆಳಗಿದವು. ಇಂದಿಗೂ ಬೆಳಗುತ್ತಿವೆ, ಮುಂದೆಯೂ ಬೆಳಗುತ್ತವೆ ಎಂಬುದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. 'ಆದ್ಯರ ವಚನ ಪರುಷ ನಂಬಿದರೆ' ಸಾಕು ನೀನು ವಿಜಯಿ. ಅಧರಕ್ಕೆ ಕಹಿಯಾದರೂ ಉದರಕ್ಕೆ ಸಿಹಿಯಾಗಿವೆ. 'ಆರೇನೆಂದರೂ ಓರಂತಿಪ್ಪುದೇ ಸಮತೆ. ಆರು ಜರಿದರೂ ಅವರೆನ್ನ ಮನದ ಕಾಳಿಕೆಯ ಕಳೆದರೆಂಬುದು ಸಮತೆ' ಎಂಬುದಾಗಿ ಸೈರಣೆ, ಸಮತೆ, ದಯೆ, ದಮ, ದಾನ, ಧರ್ಮಗಳ ಬಗೆಗೆ ಮೂಡಿದ ಶರಣರ ಮಾತುಗಳು ನುಡಿಮುತ್ತುಗಳಾಗಿವೆ; ಸ್ಫಟಿಕಸಲಾಕೆಯಾಗಿವೆ; ಲಿಂಗಮೆಚ್ಚಿ ಅಹುದಹುದೆನ್ನುವಂತಿದೆ. ತನುವಿನಲಿ ನಿರ್ಮೋಹ, ಮನದಲ್ಲಿ ನಿರಹಂಕಾರ, ಪ್ರಾಣದಲ್ಲಿ ನಿರ್ಭಯ, ಚಿತ್ತದಲಿ ನಿರಪೇಕ್ಷೆ, ವಿಷಯದಲ್ಲಿ ಉದಾಸೀನ, ಭಾವದಲಿ ದಿಗಂಬರ, ಜ್ಞಾನದಲಿ ಪರಮಾನಂದ ನೆಲೆಗೊಂಡವರವರು, ವಿಶ್ವಸಂಸ್ಕೃತಿಯ ಸಾಕಾರಮೂರ್ತಿಗಳು. ನಾಳೆ ಬಪ್ಪುದು ನಮಗಿಂದೇ ಬರಲಿ; ಇಂದು ಬಪ್ಪುದು ನಮಗೀಗಲೆ ಬರಲಿ; ಎಂಬ ಧೀರೋದಾತ್ತ, ಮನೋಧರ್ಮ ಹೇಡಿಗಳನ್ನು ಹೊಡೆದೆಬ್ಬಿಸುವಂತಿದೆ. 'ಕಾಮಬೇಕು ಲಿಂಗದಲ್ಲಿ, ಕ್ರೋಧ ಬೇಕು ಕರಣಂಗಳಲ್ಲಿ,

ಲೋಭ ಬೇಕು ಪಾದೋದಕ ಪ್ರಸಾದದಲ್ಲಿ. ಮೋಹ ಬೇಕು ಗುರುಲಿಂಗ ಜಂಗಮದಲ್ಲಿ, ಮದಬೇಕು ಶಿವಾಚಾರ ಘನವೆಂಬಲ್ಲಿ, ಮತ್ಸರಬೇಕು ಹೊನ್ನು, ಹೆಣ್ಣು, ಮಣ್ಣಿನಲ್ಲಿ; ಇಂತೀ ಸದ್ಗುಣಗಳಿರಬೇಕು. ಕಾಮಬೇಡ ಪರಸ್ತ್ರೀಯರಲ್ಲಿ, ಕ್ರೋಧಬೇಡ ಗುರುವಿನಲ್ಲಿ. ಲೋಭಬೇಡ ತನುಮನಧನದಲ್ಲಿ, ಮೋಹಬೇಡ ಸಂಸಾರದಲ್ಲಿ, ಮದಬೇಡ ಶಿವಭಕ್ತರಲ್ಲಿ, ಮತ್ಸರಬೇಡ ಸಕಲ ಪ್ರಾಣಿಗಳಲ್ಲಿ–ಇಂತೀ ಷಡ್ವಿಧ ಗುಣವನರಿದು ಮರೆಯಬಲ್ಲಡೆ ಆತನೇ ಸದ್ಭಕ್ತನೆನ್ನುವ ಉದಾತ್ತೀಕರಣ ಸಿದ್ಧಾಂತ ಯಾವ ಮನಶ್ಶಾಸ್ತ್ರಜ್ಞನೂ ಒಪ್ಪಿಕೊಳ್ಳುತ್ತಾನೆ; ಅಪ್ಪಿಕೊಳ್ಳುತ್ತಾನೆ. ಇಂದ್ರಿಯ ನಿಗ್ರಹವ ಮಾಡಿದರೆ ಹೊಂದುವುವು ದೋಷಂಗಳು; ಮುಂದೆ ಬಂದು ಕಾಡುವವು ಪಂಚೇಂದ್ರಿಯಗಳು; 'ಸತಿಪತಿ ರತಿಸುಖ ಬಿಟ್ಟರೆ ಸಿರಿಯಾಳ ಚಂಗಳೆಯರು' 'ಸತಿಪತಿ ರತಿಸುಖ ಭೋಗೋಪಭೋಗವಿಳಾಸವ ಬಿಟ್ಟನೆ ಸಿಂಧುಬಲ್ಲಾಳನು?' ನಿಮ್ಮ ಮುಟ್ಟಿ ಪರಧನ ಪರಸತಿಯರಿಗೆಳಸಿದರೆ ನಿಮ್ಮ ಚರಣಕ್ಕೆ ದೂರ, ಕೂಡಲ ಚೆನ್ನ ಸಂಗಮದೇವಾ, ಈ ಬಗೆಯ ವಿಚಾರಗಳು ಇಂದಿಗೂ ಅನ್ವಯಿಸಿಕೊಳ್ಳಲು ಸಮರ್ಥವಾಗಿವೆ; ನಮ್ಮ ಬಾಳಿಗೆ ಬೆಳಕನ್ನು ನೀಡುವಂತಹವಾಗಿವೆ. ಮುನ್ನೂರಕ್ಕೂ ಮಿಕ್ಕಿ ಶಿವಶರಣ-ಶರಣೆಯರು ಅಪಾರ ವಚನವಾಙ್ಮಯವನ್ನು ರಚಿಸಿ ಅನುಭವ ಮಂಟಪದ ಮುಖಾಂತರ ಸಮಗ್ರ ಭಾರತವನ್ನೇ ಜಾಗೃತಗೊಳಿಸಿದರು. ಈ ಅರಿವಿನಾಗರದ ಜ್ಞಾನದ ಅರವಟಿಗೆಯ ಸವಿಜಲವನ್ನು ಸವಿಯಲು ದಿಗ್ದೇಶಗಳಿಂದ ಅನೇಕ ಶಿವಶರಣ–ಶರಣೆಯರು ಕಲ್ಯಾಣ ನಗರಕ್ಕೆ ಓಡೋಡಿ ಬಂದಿರುವುದು ಐತಿಹಾಸಿಕ ಸತ್ಯ. ಇಲ್ಲಿ ಬೆಳಗಿದ ಶರಣರು ಐತಿಹಾಸಿಕ ಪುರುಷರು ಎಂಬುದನ್ನು ಮರೆಯಬಾರದು; ಮರೆಯಲಾಗದು.

ಈ ಕಲ್ಯಾಣ ಕ್ರಾಂತಿಯ ನಂತರ ೧೫ ನೆಯ ಶತಮಾನದಲ್ಲಿ ವಿಜಯನಗರದ ಪ್ರೌಢದೇವರಾಯನ ಕಾಲದಲ್ಲಿ ವಚನ ಸಾಹಿತ್ಯ ಮತ್ತೆ ಚಿ ಗು ರೊ ಡೆ ದು ಹೊಸ ಪಚ್ಚೆ ಪೈರಿಗೆ ನವಚೇತನ ಬಂದಿತು. ಈ ಕಾಲದಲ್ಲಿ ವಚನಗಳ ವಿವೇಚನೆ ವಿಮರ್ಶೆ ಸಂಕಲನ, ಸಂಪಾದನೆ ಮೊದಲಾದ ಚಟುವಟಿಕೆಗಳು ಭರದಿಂದ ನಡೆದವು. ತೋಂಟದ ಎಡೆಯೂರ ಸಿದ್ಧಲಿಂಗೇಶ್ವರರು ಈ ಕ್ರಾಂತಿಯ ಮಹಾನಾಯಕನಾಗಿ ನಿಂತರು. ನೂರೊಂದು ವಿರಕ್ತರು ಉದಯಿಸಿ ಧರ್ಮ ಜಾಗೃತಿಗೆ ನಾಂದಿ ಹಾಕಿದರು. ಸ್ವತಂತ್ರ ಸಿದ್ಧಲಿಂಗೇಶ್ವರು, ಘನಲಿಂಗದೇವರು ಮೊದಲಾದವರು ಪ್ರಮುಖರು, ಪ್ರಖ್ಯಾತರು. ಇದೇ ಪರಂಪರೆಯಲ್ಲಿ ಉಜ್ವಲ ಶಿಷ್ಯ ಪ್ರಶಿಷ್ಯರು ಬೆ ಳ ಗಿ ಹೋದರು. ಅದೊಂದು ರೋಮಾಂಚನಕಾರಿ ಇತಿಹಾಸ. ತಮ್ಮ ಅದ್ಭುತ ಸಾಧನೆ ಸಿದ್ಧಿಯಿಂದ ವಚನ ಸಾಹಿತ್ಯದ ಪುನರುಜ್ಜೀವನ ಮಾಡಿದ ಕೀರ್ತಿ ಇವರಿಗೆ ಸಂದಿದೆ. ಇದೇ ಸಂದರ್ಭದಲ್ಲಿ ಮೂಡಿ ಬಂದ ಕೃತಿ–ಶೂನ್ಯ ಸಂಪಾದನೆ.

ಈ ಸಂಪಾದನೆಗೆ ನೂರೈವತ್ತು ವರುಷಗಳ ಸುದೀರ್ಘವಾದ ಇತಿಹಾಸವಿದೆ. ಈ ಭವ್ಯ ಗ್ರಂಥದ ಪ್ರಪ್ರಥಮ ಸಂಪಾದನಕಾರ – **ಶಿವಗಣ ಪ್ರ ಸಾ ದಿ ಮಹಾ**

ದೇವಯ್ಯ (1420). ಇವನ ಮುಖದಿಂದಲೇ ಈ ಗ್ರಂಥದ ಮಹತ್ವವನ್ನು ತಿಳಿದು ಕೊಂಡರೆ ಒಳ್ಳೆಯದು. ಅದು ಹೀಗಿದೆ,

ಇದು ಪರಮಗುರು ಪರಮ ವೀರಶೈವ ಸಿದ್ಧಾಂತ ತತ್ವಜ್ಞಾನ.
ಇದು ವೀರಶೈವಾಚಾರ ಪ್ರತಿಷ್ಠಾಪನಾಚಾರ್ಯ.
ಇದು ದಿವ್ಯ ವೇದಾಂತ ಶಿರೋಮಣಿ.
ಇದು ಸಮಸ್ತ ಶಾಸ್ತ್ರ ಮುಖ್ಯ ಮುಖದರ್ಪಣ.
ಇದು ಮಹಾಜ್ಞಾನ ಪ್ರವರ್ಧನ ಪರಮಾನುಭಾವ ಸಂಬೋಧೆ.
ಇದು ಸರ್ವಾಚಾರ ಸಂಪನ್ನ ಸಮಾರೂಢ ಸಂಗ್ರಹ.
ಇದು ಪರಮರಾಜಯೋಗ ಸಾಧ್ಯ ಸಂಪಾದನ.
ಇದು ಸಚ್ಚಿದಾನಂದ ನಿತ್ಯ ಪರಿಪೂರ್ಣ ರಸಾಮೃತ ಪ್ರಸನ್ನ ಪ್ರಸಾದ.
ಇದು ಅಜ್ಞಾನತಿಮಿರಾಂಜನ ತಂತ್ರವಪ್ಪ ಪ್ರಭುದೇವರ ಶೂನ್ಯ ಸಂಪಾದನೆಯ ಮಹಾ ಪ್ರಸಂಗವುಂ ,ಬಸವರಾಜದೇವರು, ಚನ್ನಬಸವರಾಜದೇವರು ಪ್ರಭುದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳ ವಚನಗಳಿಂದ ಕಥಾಸಾಂಗತ್ಯವಾಗಿ ಶಿವಗಣ ಪ್ರಸಾದಿ ಮಹಾದೇವಯ್ಯಗಳು ಅರ್ಪಿಸಿದರು.

ಸಂವಾದ ರೂಪದಲ್ಲಿ ಸಮಂಜಸವಾಗಿ ಸಮರ್ಥವಾಗಿ ಸಂಯೋಜಿಸಿ ಅನುಭಾವ ತತ್ವದರ್ಶನಕ್ಕೆ ಒಂದುರೂಪು ಕೊಡುವುದರಲ್ಲಿ ಯಶಸ್ವಿಯಾಗಿದ್ದಾರೆ. ನಿಜಾನುಭವವನ್ನು ಪರಿಶ್ರಮದಲ್ಲಿ ಪೋಣಿಸಿದ್ದಾರೆ. ಸಮಯಾನುಸಾರ ವಚನಗಳಿಂದ ಸರಿಯಾಗಿ ನೆಯ್ದಿದ್ದಾರೆ. ಇದರ ಸಂಪಾದನೆಗಳು ಶಾಸ್ತ್ರ ಗ್ರಂಥಗಳಾಗಿದ್ದರೂ ಅದ್ಭುತ ಕಾವ್ಯ ಶಕ್ತಿಯನ್ನು, ಕಲಾತ್ಮಕ ದೃಷ್ಟಿಯನ್ನು ಪಡೆದಿವೆ. ವಚನ ಸಾಹಿತ್ಯದ ಅಧ್ಯಯನಕ್ಕೆ ಪ್ರಯೋಜನಕಾರಿಯಾಗಿದೆ. ಇಲ್ಲಿ ಸಂಕಲಿಸಿದ ವಚನಗಳು ಒಂದು ವಚನಕ್ಕೆ ಇನ್ನೊಂದು ದಾರಿಮಾಡಿಕೊಡುತ್ತವೆ. ಅವೆಲ್ಲ ಸೇರಿ ಒಂದು ಸನ್ನಿವೇಶವನ್ನು ಕಣ್ಣ ಮುಂದೆ ತಂದು ನಿಲ್ಲಿಸುತ್ತವೆ.

ತಿ. ನಂ. ಶ್ರೀಕಂಠಯ್ಯನವರು ಇದನ್ನು ಸಾಹಿತ್ಯ ದೃಷ್ಟಿಯಿಂದ 'ರಸದ ನಿಬಿಡ'ವೆಂದು ವರ್ಣಿಸಿರುವುದು ಉಚಿತವಾಗಿದೆ. ಅನುಭವ ಮಂಟಪದಲ್ಲಿ ನಡೆದಿರುವ ತಾತ್ವಿಕ ಜಿಜ್ಞಾಸೆಯ ವ್ಯಾಪ್ತಿ, ಚರ್ಚೆಗಳ ವಿಷಯ ವೈವಿಧ್ಯ ದಾರ್ಶನಿಕ ವೈಭವ ಇವುಗಳನ್ನು ಸಮಗ್ರವಾಗಿ ನಾಟಕೀಯವಾಗಿ ನಿರೂಪಿಸುವ ಗ್ರಂಥವೆಂದರೆ ಶೂನ್ಯ ಸಂಪಾದನೆ. ಒಂದರ್ಥದಲ್ಲಿ ಇದನ್ನು ಅನುಭವ ಮಂಟಪದ ಕೈಪಿಡಿಯೆಂದು ಕರೆಯಬಹುದು. ಅನುಭವ ಮಂಟಪದ ಚಿತ್ರವನ್ನು ಸಾಕಾರಗೊಳಿಸುವ ಕೃತಿಯೇ ಶೂನ್ಯ ಸಂಪಾದನೆ. ಅಂದು ಬಸವಣ್ಣನವರ ಐತಿಹಾಸಿಕತೆಯನ್ನು ಪ್ರಶ್ನಿಸಿದರು. ಚಿಲಕೂರಿ ನಾರಾಯಣರಾವ್, ಸಿದ್ಧರಾಮನ ವೀರಶೈವತ್ವವನ್ನು ಶಂಕಿಸಿದರು.

ಡಾ॥ ಡಿ. ಎಲ್. ಎಸ್. ಅನುಭವ ಮಂಟಪದ ಅಸ್ತಿತ್ವವನ್ನು ಪ್ರಶ್ನಿಸಿದವರು ಶ್ರೀಮಾನ್ ಕಪಟರಾಳ ಕೃಷ್ಣರಾಯರು. ಲಿಂ. ಹರ್ಡೇಕರ ಮಂಜಪ್ಪನವರು, ಉತ್ತಂಗಿ ಚನ್ನಪ್ಪನವರು ಅವರಿಗೆ ಸರಿಯಾದ ಉತ್ತರ ಕೊಟ್ಟು ವೀರಶೈವತತ್ವದ ಜಯಪತಾಕೆ ಹಾರಿಸಿದರು. ಈಗ 'ಶಂಭಾ' ಶೂನ್ಯ ಸಂಪಾದನೆ-ಒಂದು ಮೋಸದ ಕೃತಿ' ಯೆಂದು ಸಾರಿದ್ದಾರೆ. ನಮ್ಮ ವೀರಶೈವ ಪಂಡಿತರು, ದಿಗ್ಗಜಗಳು ಈ ಬಗೆಗೆ ತಮ್ಮ ವಿಚಾರಗಳನ್ನು ಪ್ರಕಟಿಸಲು ಮುಂದಾಗಬಾರದೇಕೆ ?–ಪ್ರತಿಭಟಿಸಬಾರದೇಕೆ ?

---



---

[ಮಹಾ ಸಂಶೋಧಕ, ಶರಣ, ವಿದ್ಯಾವಾಚಸ್ಪತಿ]

# ಲಿಂ|| ಟಿ. ಎನ್. ಮಲ್ಲಪ್ಪನವರಿಗೆ ಶ್ರದ್ಧಾಂಜಲಿ

—ಪಂಡಿತ ಚನ್ನಪ್ಪ ಎರೇಸೀಮೆ

ತಾ|| ೨೫-೧೧-೮೦ ನೆಯ ದಿನ ಬೆಂಗಳೂರಿನ ರೇಸ್‌ಕೋರ್ಸ್ ರಸ್ತೆಯಲ್ಲಿರುವ 'ಲಲಿತಪ್ರಭಾ'ಕ್ಕೆ ಹೋಗಿ, ಪಡಸಾಲೆಯಲ್ಲಿ ಕುಳಿತೆ. ನನ್ನನ್ನರಿತಿದ್ದವರೊಬ್ಬರು ನಾನು ಬಂದ ಸುದ್ದಿಯನ್ನು ಒಳಗೆ ಮಲಗಿದ್ದ ಮಲ್ಲಪ್ಪನವರಿಗೆ ಮುಟ್ಟಿಸಿದರು. ಅವರು ಎದ್ದು ತಿರುಗಾಡುವ ಸ್ಥಿತಿಯಲ್ಲಿರಲಿಲ್ಲ. ತಾವು ಮಲಗುವ ಮಂಚದ ಪಕ್ಕದಲ್ಲಿಯೇ ಒಂದು ಆಸನವನ್ನು ಹಾಕಿಸಿ, ಅನಂತರ ನನಗೆ ಒಳಗೆ ಬರಲು ಹೇಳಿಕಳಿಸಿದರು. ನಾನು ಹೋಗಿ ಶರಣು ಶರಣಾರ್ಥಿಶಾಸ್ತ್ರ ಮುಗಿಸಿ, 'ಸ್ವಾಮಿ, ನಾನು ಇನ್ನೊಮ್ಮೆ ಬಂದು ತಮ್ಮನ್ನು ಕಾಣುತ್ತೇನೆ ಈ ಸ್ಥಿತಿಯಲ್ಲಿ ತಮಗೆ ತೊಂದರೆ ಕೊಡಲಾರೆ' ಎಂದೆ 'ಇಲ್ಲಾ ಕುಳಿತುಕೊಳ್ಳಿ, ಮೊನ್ನೆ ಸ್ವಲ್ಪ ಹೃದಯ ವೇದನೆ ಕಾಣಿಸಿಕೊಂಡಿತ್ತು ಈಗ ಪರಿಸ್ಥಿತಿ ಸುಧಾರಿಸಿದೆ ಏನೂ ಪರವಾಯಿಲ್ಲ ಕುಳಿತುಕೊಳ್ಳಿ ನಿಮ್ಮೊಡನೆ ಸ್ವಲ್ಪ ಮಾತನಾಡುವುದಿದೆ' ಎಂದರು. "ಈಗ ಮಾತು ಗೀತೂ ಏನೂ ಬೇಡ ಸ್ವಾಮಿ, ಅಂದು ತಾವು ಬಸವಸಮಿತಿಯಲ್ಲಿ 'ಸಿದ್ಧಗಂಗಾಶ್ರೀ' ಯಲ್ಲಿ ಪ್ರಕಟವಾದ ತಮ್ಮ ಲೇಖನ ಹೇಗೆ ಮುದ್ರಿತವಾಗಿದೆಯೋ ನೋಡಬೇಕೆಂದಿದ್ದಿರಿ, ಇಂದು ಮುದ್ರಣವಾದ ತಮ್ಮ ಲೇಖನ ಭಾಗವನ್ನು ತೋರಿಸಿ, ಹಾಗೇ ತಮಗೆ ಗೌರವ ಸಂಭಾವನೆಯನ್ನು ಕೊಟ್ಟು ಹೋಗೋಣವೆಂದು ಬಂದೆ" ಎಂದೆ. 'ತುಂಬ ಸಂತೋಷ ಕುಳಿತುಕೊಳ್ಳಿ' ಎಂದು ನಸುನಗುತ್ತ ಹೇಳಿ ಒತ್ತಾಯಪೂರ್ವಕ ಕುಳ್ಳಿರಿಸಿಕೊಂಡರು. ನಾನು 'ಸಿದ್ಧಗಂಗಾಶ್ರೀ' ಯ ಮುದ್ರಿತಭಾಗಗಳನ್ನೆಲ್ಲ ಅವರ ಮುಂದಿಟ್ಟು ದರ್ಶನ ಶ್ರೀಯಲ್ಲಿರುವ ಅವರ ಲೇಖನ ಭಾಗವನ್ನು ತೆಗೆದು ಕೈಗೆ ಕೊಟ್ಟೆ. ನಗುತ್ತ ಅದನ್ನೆಲ್ಲ ತಿರುವಿಹಾಕಿ, 'ಪ್ರೂಫ್ ಚೆನ್ನಾಗಿ ನೋಡಿದಂತಿದೆ, ಪರವಾಯಿಲ್ಲ ನಾನು ಕೊಟ್ಟ ಸಲಹೆಗಳನ್ನು ಪಾಲಿಸಿದಂತಿದೆ' ಎನ್ನುತ್ತ ನಾನು ಕೊಟ್ಟ ಮುದ್ರಿತಭಾಗವನ್ನೆಲ್ಲ ತಿರುವಿಹಾಕುತ್ತ

'ಈಗ ಒಟ್ಟು ಎಷ್ಟು ಮುದ್ರಣವಾಗಿದೆ.'

'೧೦೭೨ ಪುಟಗಳ ಮುದ್ರಣ ಮುಗಿದಿದೆ. ಈಗ ಕೊನೆಯ ಫಾರ್ಮ್ ಮಾತ್ರ

ಅಚ್ಚಾಗುವುದು ಉಳಿದಿದೆ.'

'ಒಟ್ಟು ಎಷ್ಟು ಪುಟ ಆದ ಹಾಗಾಯಿತು.'

'ಎಲ್ಲ ಲೇಖನಗಳ ಪುಟಸಂಖ್ಯೆ ೧೦ಲಲ, ಹೆಚ್ಚಿನ ಪುಟಸಂಖ್ಯೆ ೨೪ ರಷ್ಟಾಗ ಬಹುದು'

'ಚಿತ್ರಗಳು ?'

'ಚಿತ್ರಗಳು ಒಟ್ಟು ಸುಮಾರು ೧೫೦ ಪುಟಗಳಷ್ಟು ಆಗಬಹುದು. ಅದರಲ್ಲಿ ಈಗಾಗಲೆಸುಮಾರು ನೂರು ಪುಟ ಚಿತ್ರಗಳ ಮುದ್ರಣ ಮುಗಿದಿದೆ.'

'ಇದೇನ್ರೀ! ಗ್ರಂಥ ಬಹಳ ದೊಡ್ಡದಾಯಿತಲ್ರೀ. ಪೇಪರ್ ಕೂಡ ಮ್ಯಾಪ್ ಲಿಥೋ ಬಳಸಿದ್ದೀರಿ. ಡೆಮಿ ೧/೪ ಸೈಜ್ ಬೇರೆ, ಭಾರೀ ಆಯಿತು.'

'ಶ್ರೀ ಕ್ಷೇತ್ರದ ಯಾವ ಕಾರ್ಯಗಳು ಚಿಕ್ಕ ಪ್ರಮಾಣದವು ಯಜಮಾನರೇ! ದಿನ ವೊಂದರ ಅಲ್ಲಿನ ಅಕ್ಕಿರಾಗಿಯ ಖರ್ಚೇ ಸುಮಾರು ೨೪ ಮೂಟೆಗಳಷ್ಟಲ್ಲವೆ?'

—ಎಂದು ನಗುತ್ತ ಹೇಳಿದ ಮಾತಿಗೆ ತಾವೂ ನಕ್ಕರು. ಮುದ್ರಿತವಾದ ಚಿತ್ರಗಳ ಮೇಲೆ ಕಣ್ಣಾಡಿಸಿದರು. ಅಡವೀ ಸ್ವಾಮಿಗಳ, ಉದ್ದಾನ ಸ್ವಾಮಿಗಳ, ಶಿವಕುಮಾರ ಸ್ವಾಮಿಗಳ ಚಿತ್ರಗಳನ್ನು ನೋಡಿದರು. ಸ್ವಲ್ಪ ಕಣ್ಣು ಮುಚ್ಚಿ ತೆರೆದು ಅವನ್ನೆಲ್ಲ ನನ್ನ ಕೈಗೆ ಕೊಟ್ಟು ತಮ್ಮ ಲೇಖನವನ್ನೆಲ್ಲ ತಿರುವಿಹಾಕಿ, ಉಳಿದವರ ಲೇಖನಗಳಲ್ಲಿ ಪ್ರೊ॥ ಎಸ್. ಕೆ. ರಾಮಚಂದ್ರರಾವ್ ಮತ್ತು ಡಾ॥ ಚಿದಾನಂದಮೂರ್ತಿ, ಡಾ॥ ತಿಪ್ಪೇ ರುದ್ರಸ್ವಾಮಿ, ನವ ಕಲ್ಯಾಣಮಠದ ಕುಮಾರಸ್ವಾಮಿಗಳ ಲೇಖನಗಳ ಮೇಲೆ ಕಣ್ಣಾ ಡಿಸಿ, ಅಡವಿಸ್ವಾಮಿಗಳ ಬಗೆಗೆ ಎಲ್ಲಿದೆ' ಎಂದಾಗ ಆ ಭಾಗ ತೋರಿಸಿದೆ. ಅದರ ಮೇಲೂ ಕಣ್ಣಾಡಿಸಿದರು. ಕೊಟ್ಟ ಗೌರವ ಧನ ಸ್ವೀಕರಿಸಿ ರಸೀದಿಗೆ ಸಹಿಮಾಡು ವಾಗ 'ಸ್ಟ್ಯಾಂಪ್ ಬೇಕಲ್ಲಪ್ಪ' ಎಂದು ತಮ್ಮ ಡೈರಿಯಲ್ಲಿ ಸ್ಟ್ಯಾಂಪನ್ನು ಹುಡುಕತೊಡಗಿ ದರು, ಸ್ಟ್ಯಾಂಪ್ ಸಿಗಲಿಲ್ಲ. 'ಇರಲಿ ಹಾಗೇ ಸಹಿಮಾಡಿಬಿಡಿ ಸ್ವಾಮಿ, ಆಮೇಲೆ ನಾವು ಸ್ಟ್ಯಾಂಪ್ ಹಚ್ಚಿ ಕ್ರಾಸ್ ಮಾಡಿಕೊಳ್ಳುತ್ತೇವೆ' ಎಂದೆ. 'ಹಾಗೇ ಸಹಿಮಾಡಿ ಕೊಡುತ್ತ —

'ಚಿಕ್ಕ ಸ್ವಾಮಿಗಳು ಶಾಸ್ತ್ರ ಗ್ರಂಥಗಳ ಅಭ್ಯಾಸ ಮಾಡುತ್ತಾರೇನ್ರೀ'

'ಹೌದು ಸ್ವಾಮಿ, ಅವರಿಗೆ ಪಾಠಪ್ರವಚನಕ್ಕಾಗಿ ಎರಡುಮೂರು ಜನ ಶಾಸ್ತ್ರಿ ಗಳನ್ನು ಶ್ರೀಗಳವರು ನೇಮಕಗೊಳಿಸಿದ್ದಾರೆ.'

'ದೊಡ್ಡ ಸ್ವಾಮಿಗಳು ಆರೋಗ್ಯವಾಗಿರುವರೇ'

'ಹೌದು ಸ್ವಾಮಿ, ಆರೋಗ್ಯವಾಗಿದ್ದಾರೆ. ಆದರೆ ಕೆಲಸಕಾರ್ಯಗಳ ಒತ್ತಡ ಅತ್ಯಂತ ಹೆಚ್ಚು. ಇಪ್ಪತ್ತುನಾಲ್ಕು ಘಂಟೆಗಳೂ ಬಿಡುವಿಲ್ಲದ ಕಾರ್ಯಬಾಹುಳ್ಯ.

ಇಷ್ಟೊಂದು ಒತ್ತಡದಲ್ಲೂ ಉತ್ತಮ ಆರೋಗ್ಯ ಸ್ಥಿತಿಯಲ್ಲಿದ್ದಾರೆ.'

'ಇಂದು ನಿನ್ನೆಯದಲ್ರೀ! ಮೊದಲಿನಿಂದಲೂ ಅವರದು ಕ್ರಿಯಾಯೋಗವೇ: ಅದೊಂದು ಅದ್ಭುತ ಚೇತನ. ನಮ್ಮೆಲ್ಲರ ಪುಣ್ಯ ಅವರನ್ನು ಪಡೆದಿರುವುದು.

—ಎಂದು ಸ್ವಲ್ಪ ಹೊತ್ತು ಮೌನವಾಗಿದ್ದು ಸ್ವಲ್ಪ ಕಣ್ಣು ಮುಚ್ಚಿ ತೆರೆದು 'ನೀವು ಇನ್ನು ೧೦-೧೫ ದಿನಬಿಟ್ಟು ಬನ್ನಿರಿ ಸ್ವಲ್ಪ ಚರ್ಚೆ ಮಾಡುವುದಿದೆ. ನಿಮಗೆ ಕೆಲವು ಗ್ರಂಥಗಳನ್ನೂ ಕೊಡುವುದಿದೆ ಕೊಡುತ್ತೇನೆ' ಎಂದರು. ನಾನು ಎದ್ದು ನಿಂತು ನಮಸ್ಕಾರ ಹೇಳಿ ಹೊರಟುಬಂದೆ. ಅವರು ತಿಳಿಸಿದಂತೆ ಅವರನ್ನು ಕಾಣಲು ನಾನು ಹೋಗುವುದಕ್ಕೆ ಮುನ್ನವೇ ಅವರು ತಾ॥ ೧೬-೧೨-೮೦ ರಂದು ಸಾಂಬಲೋಕ ಸೇರಿ ಬಿಟ್ಟರು. ಇದೊಂದು ನನ್ನ ವೈಯಕ್ತಿಕ ನಷ್ಟ.

ಶ್ರೀ ಮಲ್ಲಪ್ಪನವರ ಸಂಶೋಧಕ ಬುದ್ಧಿ, ಆಳವಾಗಿ ಅಧ್ಯಯನ ಮಾಡಿ ಯಾವುದೇ ವಿಷಯವನ್ನು ಪೂರ್ವಸೂರಿಗಳ ಸಾಕಷ್ಟು ಆಧಾರ ಕೊಟ್ಟು ತಮ್ಮ ವಿಷಯ ಸಮರ್ಥನೆ ಮಾಡುತ್ತಿದ್ದರು. ಏತನ್ಮಧ್ಯೇ ತಮ್ಮ ಸ್ವತಂತ್ರ ವಿಚಾರಪ್ರವೃತ್ತಿಯನ್ನು ತರ್ಕಬದ್ಧವಾಗಿ ಹರಿಯಬಿಡುತ್ತಿದ್ದರು. ಶಕ್ತಿ ವಿಶಿಷ್ಟಾದ್ವೈತ ತತ್ತ್ವದ ಪ್ರಾಚೀನತೆಯ ಬಗೆಗೆ ವ್ಯಕ್ತಪಡಿಸುತ್ತಿದ್ದ ಇವರ ನಿಲುವು ವಿದ್ವಜ್ಜನ ಸ್ತುತ್ಯವಾಗಿರುತ್ತಿತ್ತು. ಆಳವಾದ ಇವರ ಪಾಂಡಿತ್ಯ, ತರ್ಕಬದ್ಧವಾದ ನಿಲುವು, ಆಧಾರಗಳ ಸಂಗ್ರಹ, ವೇದೋಪನಿಷತ್ ಮಂತ್ರಗಳಿಗೆ ಮಾಡುತ್ತಿದ್ದ ಅರ್ಥ, ಪಾರಿಭಾಷಿಕ ಪದಗಳ ಮೇಲೆ ಚಲ್ಲುವ ಹೊಸಬೆಳಕು, ಬಸವಾದಿ ಶರಣರ ವಚನಗಳನ್ನು ಅರ್ಥೈಸುವ ರೀತಿಗಳು ಇವರ ಬಹುಶ್ರುತತ್ವ ಪ್ರತಿಭೆಗಳಿಗೂ ಸ್ವಾಧ್ಯಾಯ-ಸ್ವಾನುಭಾವಗಳಿಗೂ ಒರೆಗಲ್ಲುಗಳಾಗಿವೆ ಎಂಬುದಕ್ಕೆ ಅವರು ಬಿಟ್ಟು ಹೋಗಿರುವ ಅವರ ಗ್ರಂಥಗಳೇ ಸಾಕ್ಷಿಗಳಾಗಿವೆ. ಸಾವಿರಾರು ವರ್ಷಗಳಿಂದ ಸಮಸ್ಯೆಯಾಗಿಯೆ ಉಳಿದಿದ್ದ ಋಗ್ವೇದದ 'ನಾಸದೀಯ ಸೂಕ್ತ'ಕ್ಕೆ ಕನ್ನಡದಲ್ಲಿ ಬಿಡಿಸಿ ಬಿಡಿಸಿ ಅರ್ಥವನ್ನು ಹೇಳುವಲ್ಲಿ ಇವರು ತೋರಿಸಿರುವ ಪ್ರೌಢ ಪಾಂಡಿತ್ಯಧ ನಿಲುವು ಇವರ ಕನ್ನಡದ ಆಳವಾದ ಪಾಂಡಿತ್ಯಕ್ಕೊ ಹಿಡಿದ ಕನ್ನಡಿಯಂತೆ, ಮಧ್ಯಕಾಲೀನ ಕನ್ನಡ ಬಳಸಿ ಪದ್ಯರೂಪಮಾಡಿ ಸಂಸ್ಕೃತ ಶ್ಲೋಕಾರ್ಥವನ್ನು ಸೊಗಸಾಗಿ ಪ್ರತಿಬಿಂಬಿಸುತ್ತ ಬಂದಿದ್ದಾರೆ. ಪದ್ಯ ರಚನಾಕೌಶಲವೂ ಅವರದಾಗಿತ್ತೆಂಬುದನ್ನು ಅವರ ಗ್ರಂಥಗಳಲ್ಲಿ ಕಾಣಬಹುದಾಗಿದೆ. ಗಂಭೀರ ನಿಲವಿನ, ಅಪರೂಪಕ್ಕೊಮ್ಮೊಮ್ಮೆ ಬಾಯಿಬಿಡದಂತೆಯೇ ನಗುವ, ಮಾತಿನಲ್ಲಿ ಒಮ್ಮೆಲೆ ಸಲಿಗೆಯನ್ನು ತೋರಿಸದ ಇವರ ಗುಣಸ್ವಭಾವಗಳು ಲೋಕಕ್ಕೆ ಒಮ್ಮೆಲೆ ಅರ್ಥವಾಗುವುದಿಲ್ಲ. ಆದರೆ ಮಲ್ಲಪ್ಪನವರು ಬಹು ಸುಸಂಸ್ಕೃತರು, ಸ್ವತಂತ್ರಶೀಲರು. ಇವರೊಡನೆ ಮಾತಿಗೆ ಪ್ರಾರಂಭವಾದರೆ ಸಂಶೋಧನೆಯ ನಿಲವೇ ಸದಾ ಎದ್ದು ಕಾಣು

ತ್ತಿತ್ತು. 'ಆ ವಚನದ ಅರ್ಥ ಹೀಗೆ' 'ಈ ಉಪನಿಷತ್ತಿನ ಈ ನುಡಿಯ ಅರ್ಥ ಈ ವಚನದಲ್ಲಿದೆ' 'ಅವರ ಆ ಲೇಖನ ಅಷ್ಟೊಂದು ಪ್ರಬುದ್ಧವಲ್ಲ' 'ಅದು ಹೀಗಿರಬೇಕಾಗಿತ್ತು' 'ಪಾಶುಪತ ಶೈವದ ಬಗೆಗೆ ಇವರ ನಿಲುವು ಹೀಗೆ' 'ನನ್ನ ನಿಲುವು ಇದು' ಇದು ಸರಿಯಲ್ಲ; ಇದು ಸರಿ. ಅವರ ಆ ಲೇಖನದ ಅಭಿಪ್ರಾಯ ಸರಿಯಲ್ಲ ಇದು ಸರಿ— ಇವೇ ಮೊದಲಾದ ವಿಷಯ ತುಂಬಿರುತ್ತಿದ್ದವು. ಪಾಶುಪತಶೈವ, ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತ, ವಚನಕಾರರ ಆಳ್ತನ—ಇವುಗಳ ಬಗೆಗೆ ಮಲ್ಲಪ್ಪನವರು ಬರೆದಿರುವ ಬರವಣಿಗೆಗಳು ವಿದ್ವಾಂಸ ಲೋಕದಲ್ಲಿ ಅಪಾರ ಮೆಚ್ಚುಗೆ ಗಳಿಸಿವೆ. ಸಾಯಣ್ ಭಾಷ್ಯಾಧಾರಪೂರ್ವಕವಾಗಿ ನಾಸದೀಯ ಸೂಕ್ತಕ್ಕೂ, ಪುರುಷಸೂಕ್ತಕ್ಕೂ ಇವರು ಬರೆದಿರುವ ಬರವಣಿಗೆಗಳು ಶ್ಲಾಘ್ಯವೆನಿಸಿವೆ. ಇವುಗಳ ಅರ್ಥಕ್ಕೆ ತೊಡಗುವುದು 'ಹಾವಿನ ಹುತ್ತಕ್ಕೆ ಕೈಯಿಕ್ಕಿದಂತೆ' ಆದರೆ ಮಲ್ಲಪ್ಪನವರು ಕೈಯಿಕ್ಕಿ ತಮ್ಮ ಪಾಂಡಿತ್ಯವೆಂಬ ಗಾರುಡ ಮಂತ್ರದಿಂದ ಹಾವನ್ನೇ ವಶಪಡಿಸಿಕೊಂಡಿದ್ದಾರೆ. ಇವರು ಬರೆದಿರುವ ವೀರಶೈವದ ಉಗಮ ಮತ್ತು ಪ್ರಗತಿ, ವಚನೋಪನಿಷತ್ತು, ಕೇನೋಪನಿಷತ್ ತಾತ್ಪರ್ಯ ನಿರ್ಣಯ, ಮುಂಡಕೋಪನಿಷತ್ ಪ್ರಕಾಶ ಈಶಾವಾಸ್ಯೋಪನಿಷತ್ ಪ್ರಕಾಶ, ಸಾಯಣ್ ಭಾಷ್ಯೋಪೇತ ಪುರುಷಸೂಕ್ತ, ಸಾಯಣ್ ಭಾಷ್ಯೋಪೇತ ನಾಸದೀಯ ಸೂಕ್ತ—ಮೊದಲಾದ ಗ್ರಂಥಗಳೂ, ನೂರಾರು ಬೇರೆಬೇರೆ ಗ್ರಂಥಗಳಲ್ಲಿ ಮತ್ತು ನಿಯತಕಾಲಿಕೆಗಳಲ್ಲಿ ಬಂದಿರುವ ಲೇಖನಗಳು ಇವರ ಅಪಾರ ವಿದ್ವತ್ತಿಗೊಂದು ಮೈಲುಗಲ್ಲೆನ್ನಬಹುದು. ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ, ಶ್ರೀಗಳವರಲ್ಲಿ ಅಪಾರ ಭಕ್ತಿ ಪ್ರೇಮಗಳನ್ನಿಟ್ಟುಕೊಂಡಿದ್ದ ಇವರು ಮಠಕ್ಕೆ ಸಂಬಂಧಿಸಿದವರು ಯಾರೇ ಸಿಗಲಿ, 'ಶ್ರೀಗಳವರು ಹೇಗಿದ್ದಾರೆ? ಮಠದ ಕೆಲಸಕಾರ್ಯಗಳು ಹೇಗೆ ನಡೆಯುತ್ತಿವೆ? ನಾನು ಹೋಗಿಲ್ಲ, ಹೋಗಿ ದರ್ಶನ ಮಾಡಿಕೊಂಡು ಬರಬೇಕು, ಬಹಳ ದಿನವಾಯಿತು, ಇತ್ಯಾದಿಯಾಗಿ ನುಡಿಯುತ್ತಿದ್ದರು. ಇವರ ಸಹೋದರರಲ್ಲೊಬ್ಬರಾದ ಲಿಂ|| ನಂಜುಂಡಪ್ಪನವರಂತೂ ಶ್ರೀ ಕ್ಷೇತ್ರಕ್ಕೆ ಅಪಾರ ಸೇವೆ ಸಲ್ಲಿಸಿದವರು. ವಾರಕ್ಕೊಮ್ಮೆಯಾದರೂ ಶ್ರೀಗಳವರ ಶ್ರೀ ಕ್ಷೇತ್ರದ ದರ್ಶನವಿಲ್ಲದೆ ಇರುತ್ತಿರಲಿಲ್ಲ. ಇವರ ಇನ್ನೊಬ್ಬ ಸಹೋದರ ಲಿಂ|| ಟಿ. ಎನ್. ಚನ್ನಪ್ಪನವರೂ ಅಷ್ಟೆ. ಈ ಮೂವರು ಸಹೋದರರ ಭಕ್ತಿಭಾವ ಶ್ರೀ ಸಿದ್ಧಗಂಗಾ ಕ್ಷೇತ್ರದ ವಿಷಯದಲ್ಲಿ ತುಂಬಿತುಳುಕುತ್ತಿತ್ತು.

೬೪ ಶೀಲಗಳನ್ನು ಆಚರಿಸಿ ವೀರಶೈವ ಶರಣ ಶರಣೆಯರ ಮಾಲಿಕೆಯಲ್ಲಿ ವಿರಾಜಮಾನಳಾಗಿರುವ ಕ್ರಿ. ಶ. ಸು. ೧೩ ನೆಯ ಶತಮಾನದ ಸರ್ವಶೀಲೆ ಚೆನ್ನಮ್ಮನವರ ಪುಣ್ಯಭೂಮಿ 'ಕಲ್ಯ' ಶ್ರೀ ಮಲ್ಲಪ್ಪನವರ ಮೂಲ ಊರು. ಆ ಪುಣ್ಯಭೂಮಿಯ ಆಧ್ಯಾತ್ಮಿಕ ಪ್ರತಿಭೆ ಮಲ್ಲಪ್ಪನವರಲ್ಲಿ ಮೈವೆತ್ತು ಬಂದಿತ್ತು. ವಿದ್ಯಾಭ್ಯಾಸ ಮುಗಿಸಿ ನ್ಯಾಯಾಂಗಕ್ಕೆ ಸೇರಿ ೩೫ ವರ್ಷಗಳು ಅಖಂಡ ಸೇವೆ ಸಲ್ಲಿಸಿ ೧೯೫೪ ರಲ್ಲಿ ಕರ್ನಾಟಕ

ಹೈಕೋರ್ಟಿನ ನ್ಯಾಯಮೂರ್ತಿ ಸ್ಥಾನದಿಂದ ನಿವೃತ್ತರಾದ ಶ್ರೀಯುತರು ಕೊನೆಯವರೆಗೂ ಸಂಶೋಧನಾ ಕ್ಷೇತ್ರದಲ್ಲಿ ದುಡಿದು ೧೬-೧೨-೮೦ ರಂದು ತಮ್ಮ ೮೮ನೆಯ ವಯಸ್ಸಿನಲ್ಲಿ ಲಿಂಗೈಕ್ಯರಾದದು ಕನ್ನಡನಾಡಿನ ಸಂಶೋಧನಾ ಪ್ರಪಂಚಕ್ಕೆ ಸಾಹಿತ್ಯ ಪ್ರಪಂಚಕ್ಕೆ ತುಂಬಬಾರದ ನಷ್ಟ. ಸಿದ್ಧಗಂಗಾ ಪತ್ರಿಕೆಯು ಈ ಮಹಾ ವಿದ್ವಾಂಸರಿಗೆ ಶರಣರಿಗೆ ತನ್ನ ಶ್ರದ್ಧಾಂಜಲಿಯನ್ನು ಅರ್ಪಿಸುವುದರ ಜೊತೆಗೆ ಇವರ ಅಗಲುವಿಕೆಯಿಂದ ಅವರ ಮಕ್ಕಳು, ಮೊಮ್ಮಕ್ಕಳು ಅಪಾರ ಬಂಧುವರ್ಗಕ್ಕಾದ ದುಃಖವನ್ನು ಸಹಿಸುವ ಶಕ್ತಿಯನ್ನು ತೋಂಟದ ಸಿದ್ಧಲಿಂಗೇಶ್ವರರು ಕರುಣಿಸಲೆಂದು ಹಾರೈಸುತ್ತೇವೆ.

---

## ದೇಹ ಅಸ್ಥಿರ

—ನ. ಮುನಿಸ್ವಾಮಿ

ಊರೆಲ್ಲವ ಕೂಡಿಸಿ ಅತ್ತು ಬೊಬ್ಬಿಟ್ಟು
ಹೆಸರ ಬಿಟ್ಟು ಹೆಣವೆಂದು ಹೆಸರಿಟ್ಟು
ಮುಳ್ಳಿರೆದ ಕಾಡೊಳು ಕೊಂಡೊಯ್ದು ಸುಟ್ಟು
ನೀರೊಳು ಮುಳುಗಿ ನೆನಹ ಮರೆತರಲ್ಲಾ !

ತಿನಿಸುಗಳ ಮಾಡಿಟ್ಟರು ಉಣಿಸುಗಳ ಉಂಡರು
ಮಾನಿನಿಯರೊಡನೆ ಕೂಡಿ ನಲಿದಾಡಿದರು
ಎಡಭಾಗದಲ್ಲಿಯೇ ತುಸು ನೋವೆಂದು ನುಡಿದರು
ಅಂಗಾತ ಮಲಗಿದರು ಅಸು ತೊರೆದರಲ್ಲಾ !

('ತಿರುಮಂದಿರಂ' ಎಂಬ ಪುರಾತನ [ತಮಿಳು] ಶೈವ ಸಿದ್ಧಾಂತ ಕೃತಿಯ ಆಯ್ದ ಕೆಲವು ಪದ್ಯಗಳ ಕನ್ನಡ ಅನುವಾದ.)

---

# ಇವರು ಯಾರು?

—ಹೆಗ್ಗವಾಡಿ ಗುರುಸಿದ್ದಪ್ಪ

ಶ್ರೀ ಯಲ್ಲಿದ್ದರೂ ಸಿರಿಯಲ್ಲಿಲ್ಲ !
ಶಿವನಲ್ಲಿದ್ದರೂ ಈಶ್ವರನಲ್ಲಿಲ್ಲ !
ವನಜದಲ್ಲಿದ್ದರೂ ಕಮಲದಲ್ಲಿಲ್ಲ !
ಕುಮುದದಲ್ಲಿದ್ದರೂ ನೈದಿಲೆಯಲ್ಲಿಲ್ಲ !
ಮಾಸನಲ್ಲಿದ್ದರೂ ಮನ್ಮಥನಲ್ಲಿಲ್ಲ !
ರಥದಲ್ಲಿದ್ದರೂ ತೇರಿನಲ್ಲಿಲ್ಲ !
ಶಿಖೆಯಲ್ಲಿದ್ದರೂ ಜುಟ್ಟಿನಲ್ಲಿಲ್ಲ !
ವತ್ಸನಲ್ಲಿದ್ದರೂ ಪುತ್ರನಲ್ಲಿಲ್ಲ !
ಯೋಚನೆಯಲ್ಲಿದ್ದರೂ ಚಿಂತೆಯಲ್ಲಿಲ್ಲ !
ಗಿರಿಯಲ್ಲಿದ್ದರೂ ಬೆಟ್ಟದಲ್ಲಿಲ್ಲ !

(ಉತ್ತರ ೬೯)

ಲೇಖನಾಂಕ–೧

# ಕಾಶ್ಮೀರ ಶಿವಾದ್ವೈತ ಸಿದ್ಧಾಂತ

—ಜಿ ರುದ್ರಪ್ಪ.

ಕಾಶ್ಮೀರ ಶಿವಾದ್ವೈತ ಸಿದ್ಧಾಂತವನ್ನು ಪ್ರಕಾಶಕ್ಕೆ ತಂದವರಲ್ಲಿ ಮೊದಲನೆಯವನು ಸಿದ್ಧ ಪುರುಷನಾದ ವಸುಗುಪ್ತನು. ಈತನು ಈಗಿನ ಶ್ರೀನಗರದ ಹತ್ತಿರ ಇರುವ ಮಹಾದೇವಗಿರಿಯೆಂಬ ಕ್ಷೇತ್ರದಲ್ಲಿ ವಾಸವಾಗಿದ್ದನು. ಒಂದು ದಿವಸ ರಾತ್ರಿ ಈತನ ಸ್ವಪ್ನದಲ್ಲಿ ಪರಶಿವನೇ ಬಂದು "ಇಲ್ಲಿಗೆ ಸಮೀಪದಲ್ಲಿರುವ ಶಿಲಾತಲದಲ್ಲಿ ಶಿವಾದ್ವೈತ ಸಿದ್ಧಾಂತವನ್ನು ಪ್ರತಿಪಾದನೆ ಮಾಡುವ ಶಿವ ಸೂತ್ರಗಳು ಕೆತ್ತಲ್ಪಟ್ಟಿವೆ. ಆ ಸೂತ್ರಗಳನ್ನು ನೀನು ಉದ್ಧಾರ ಮಾಡಿ ಯೋಗ್ಯರಾದ ಶಿಷ್ಯರುಗಳಲ್ಲಿ ಪ್ರಚಾರ ಮಾಡು" ಎಂದು ಹೇಳಲಾಗಿ ಅದೇ ರೀತಿ ವಸುಗುಪ್ತನು ಆ ಶಿಲಾತಲವನ್ನು ಹುಡುಕಿ ಮುಟ್ಟಿದ ಮಾತ್ರದಿಂದಲೇ ತಿರುಗಿದ ಆ ಬಂಡೆಯ ಮೇಲೆ ಕೆತ್ತಿದ್ದ ಶಿವ ಸೂತ್ರಗಳನ್ನುದ್ಧರಿಸಿ ಯೋಗ್ಯರಾದ ಶ್ರೀ ಕಲ್ಲಟ ಮೊದಲಾದ ಉತ್ತಮ ಶಿಷ್ಯರಲ್ಲಿ ಪ್ರಕಾಶ ಪಡಿಸಿದನು. ಮತ್ತು ಸ್ಪಂದಕಾರಿಕೆಗಳನ್ನು ಬರೆದು ಈ ಸೂತ್ರಾರ್ಥಗಳನ್ನು ಪ್ರಚಾರ ಮಾಡಿದನು. ಈ ವಿಷಯದಲ್ಲಿ ಇನ್ನೊಂದು ಪ್ರವಾದವುಂಟು. ಸ್ವಪ್ನದಲ್ಲಿ ಶಿವನೇ ಸಿದ್ಧಪುರುಷನ ರೂಪದಿಂದ ಬಂದು ಶಿವಸೂತ್ರಗಳನ್ನು ವಸುಗುಪ್ತನಿಗೆ ಉಪದೇಶಿಸಿದನೆಂದು ಅವುಗಳನ್ನು ವಸುಗುಪ್ತನು ಯೋಗ್ಯರಾದವರಲ್ಲಿ ಪ್ರಚಾರ ಮಾಡಿದನೆಂದೂ ಹೇಳುತ್ತಾರೆ. ಏನೇ ಆಗಲಿ ಕಾಶ್ಮೀರದ ಶಿವಾದ್ವೈತ ಸಿದ್ಧಾಂತಕ್ಕೆ ಈಗ ಪ್ರಚಾರದಲ್ಲಿರುವ ಶಿವಸೂತ್ರಗಳೇ ಮೂಲವೆಂಬುದರಲ್ಲಿ ಸಂದೇಹವಿಲ್ಲ. ಮಹಾದೇವಗಿರಿಯಲ್ಲಿ ಇಂದಿಗೂ ಶಿವ ಸೂತ್ರಗಳು ಕೆತ್ತಿದ್ದ ಬಂಡೆಯನ್ನು ತೋರಿಸುತ್ತಾರೆ. ಅದಕ್ಕೆ ಶಂಕರ ಫಲ್ (ಶಂಕರೋಫ್) ಎಂದು ಕರೆಯುತ್ತಾರೆ.

ವಸುಗುಪ್ತನ ತರುವಾಯ ಕಲ್ಲಟ ಸೋಮಾನಂದ ಮೊದಲಾದ ಪಂಡಿತರು ಅನೇಕ ಗ್ರಂಥಗಳನ್ನು ಬರೆದು ಈ ಸಿದ್ಧಾಂತವನ್ನು ಪ್ರಚಾರ ಮಾಡಿದ್ದಾರೆ. ಸೋಮಾನಂದರು 'ಶಿವದೃಷ್ಟಿ' ಎಂಬ ಉದ್ಗ್ರಂಥವನ್ನು ಉತ್ಪಲಾಚಾರ್ಯರು 'ಪ್ರತ್ಯಭಿಜ್ಞಾಕಾರಿಕಾ' ಎಂಬ ಪ್ರಕರಣ ಗ್ರಂಥವನ್ನೂ ಬರೆದಿರುತ್ತಾರೆ. ಅಭಿನವ

ಗುಪ್ತಾಚಾರ್ಯರು ಈ ಸಿದ್ಧಾಂತವನ್ನು ಕುರಿತು ಅನೇಕ ಸ್ವತಂತ್ರ ಗ್ರಂಥಗಳನ್ನು ಬರೆದಿರುವುದಲ್ಲದೆ ಉತ್ಪಲಾಚಾರ್ಯರ ಪ್ರತ್ಯಭಿಜ್ಞಾಕಾರಿಕೆಗಳಿಗೆ ಈಶ್ವರ ಪ್ರತ್ಯಭಿಜ್ಞಾವಿಮರ್ಶಿನಿಯೆಂಬ ಸರ್ವಾಂಗ ಸುಂದರವಾದ ಟೀಕೆಯನ್ನು ಬರೆದಿರುತ್ತಾರೆ. ಇವರು ನೈಷ್ಠಿಕ ಬ್ರಹ್ಮಚಾರಿಗಳಾಗಿ ಅನೇಕ ಪಂಡಿತರಲ್ಲಿ ಶಾಸ್ತ್ರಾಭ್ಯಾಸವನ್ನು ಮಾಡಿ ತತ್ವ ಸಾಕ್ಷಾತ್ಕಾರವನ್ನು ಪಡೆದ ಸಿದ್ಧಪುರುಷರು. ಸಾವಿರಾರು ಶಿಷ್ಯರಿಗೆ ಜ್ಞಾನ ಬೋಧೆಯನ್ನು ಮಾಡಿರುತ್ತಾರೆ. ಅಷ್ಟೇ ಅಲ್ಲದೆ ಅಲಂಕಾರಶಾಸ್ತ್ರದಲ್ಲಿಯೂ ನಾಟ್ಯ ಶಾಸ್ತ್ರದಲ್ಲಿಯೂ ಉದ್ಗ್ರಂಥಗನ್ನು ರಚಿಸಿರುತ್ತಾರೆ. ಇಂದಿಗೂ ಇವರ ಗ್ರಂಥಗಳು ಪಂಡಿತರ ಪ್ರಶಂಸೆಗೆ ಪಾತ್ರಗಳಾಗಿವೆ.

ಪ್ರತ್ಯಭಿಜ್ಞಾಕ್ರಮುವನ್ನನುಸರಿಸಿ ಅನೇಕ ಗ್ರಂಥಗಳು ಬರೆಯಲ್ಪಟ್ಟಿವೆ: ಅವುಗಳಲ್ಲಿ ಸೋಮಾನಂದರ 'ಶಿವದೃಷ್ಟಿ' ಉತ್ಪಲಾಚಾರ್ಯರ ಪ್ರತ್ಯಭಿಜ್ಞಾಕಾರಿಕಾ' ಇವು ಮುಖ್ಯವಾದವುಗಳು. ಒಂಭತ್ತನೆಯ ಶತಮಾನದಲ್ಲಿ ವಸುಗುಪ್ತನಿಂದ ಪ್ರಾರಂಭವಾದ ಈ ಸಿದ್ಧಾಂತ ಪ್ರಚಾರವು ಹನ್ನೊಂದನೆಯ ಶತಮಾನದಲ್ಲಿದ್ದ ಅಭಿನವ ಗುಪ್ತಾಚಾರ್ಯರ ಶಿಷ್ಯನಾದ ಮಹಾ ಮಹೇಶ್ವರಾಚಾರ್ಯ ಕ್ಷೇಮರಾಜನವರೆಗೂ ಪುಂಖಾನುಪುಂಖವಾಗಿ ಬೆಳೆದು ಬಂದಿರುತ್ತದೆ. ಈ ಕ್ಷೇಮರಾಜನು ಶಿವಸೂತ್ರಗಳಿಗೆ "ಶಿವಸೂತ್ರ ವಿಮರ್ಶಿನಿ" ಎಂಬ ಟೀಕೆಯನ್ನು ಬರೆದಿರುತ್ತಾನೆ. ಈತನು ಪ್ರತ್ಯಭಿಜ್ಞಾಶಾಸ್ತ್ರವನ್ನು ಕುರಿತು ಇನ್ನೂ ಅನೇಕ ಗ್ರಂಥಗಳನ್ನು ರಚಿಸಿರುತ್ತಾನೆ. ಪ್ರತ್ಯಭಿಜ್ಞಾಶಾಸ್ತ್ರದ ತತ್ವವನ್ನು ಸಂಗ್ರಹವಾಗಿ ತಿಳಿಸುವುದಕ್ಕಾಗಿ ಪ್ರತ್ಯಭಿಜ್ಞಾ ಹೃದಯವೆಂಬ ಗ್ರಂಥವನ್ನು ರಚಿಸಿರುತ್ತಾನೆ. ಇದರಲ್ಲಿ ಕೇವಲ ಇಪ್ಪತ್ತು ಸೂತ್ರಗಳಲ್ಲಿ ಶಾಸ್ತ್ರಾರ್ಥಗಳನ್ನು ಸಂಗ್ರಹಿಸಿ ಇದಕ್ಕೆ ತಾನೇ ಒಂದು ವ್ಯಾಖ್ಯಾನವನ್ನು ಬರೆದಿರುತ್ತಾನೆ. ಈ ಪ್ರತ್ಯಭಿಜ್ಞಾ ಹೃದಯದ ಕನ್ನಡ ಭಾವಾನುವಾದವನ್ನು ಈ ಗ್ರಂಥದಲ್ಲಿ ನಿರೂಪಿಸಿದೆ.

**ತ್ರಿಕಶಾಸ್ತ್ರ:—** ಈ ಶಿವಾದ್ವೈತ ಸಿದ್ಧಾಂತವನ್ನು ತ್ರಿಕಶಾಸ್ತ್ರ, ಸ್ಪಂದಶಾಸ್ತ್ರ ಪ್ರತ್ಯಭಿಜ್ಞಾಶಾಸ್ತ್ರ ಎಂದು ಕರೆಯುವ ವಾಡಿಕೆ ಇದೆ. ತ್ರಿಕಶಾಸ್ತ್ರವೆಂದರೆ ಪತಿ ಪಶು, ಪಾಶ ಎಂಬ ಮೂರು ಪ್ರಧಾನ ವಿಭಾಗಗಳುಳ್ಳ ಶಾಸ್ತ್ರವೆಂದರ್ಥ ಪತಿ ಎಂದರೆ ಪರಮ ಶಿವ. ಪಶು ಎಂದರೆ ಬದ್ಧಜೀವ. ಪಾಶು ಎಂದರೆ ಪರಮಶಿವನಿಂದ ಜೀವವನ್ನ ಬೇರ್ಪಡಿಸಿ ಜೀವನನ್ನು ಸಂಸಾರಾವಸ್ಥೆಯಲ್ಲಿಟ್ಟಿರುವ ಬಂಧ. ಜೀವನು ಶಿವನಿಂದ ತಾನು ಬೇರೆಯಲ್ಲವೆಂದು ತಿಳಿದಾಗ ಪಾಶವು ಮಾಯವಾಗುವುದು. ಪಾಶವನ್ನು ಮಲವೆಂದು ಕರೆಯುವುದು ಈ ಸಂಪ್ರದಾಯದಲ್ಲಿ ಸಾಮಾನ್ಯ ವಿಷಯ: ಮಲನಿವೃತ್ತಿಯಿಂದ ಮೋಕ್ಷ ಪ್ರಾಪ್ತಿಯೆಂಬುದು ಈ ಮತದ ಗುರಿ. ಇದರಿಂದ ಇದಕ್ಕೆ ಪಾಶುಪತ ಮತವೆಂದು ಹೆಸರಾಯಿತು.

**ಸ್ಪಂದಶಾಸ್ತ್ರ:—** ಪರಿಪೂರ್ಣನಾದ ಶಿವನು ಪರಿಮಿತವಾದ ವಿಶ್ವವನ್ನು ಪ್ರಕಾಶ

ಪಡಿಸಬೇಕಾದರೆ ತನ್ನ ಮೊದಲನೆಯ ಸ್ಥಿತಿಯಿಂದ ಶಕ್ತಿಗಳನ್ನು ಪ್ರಸರಿಸಬೇಕು. ಹೀಗೆ ಪ್ರಸರಿಸುವುದರಲ್ಲಿ ಮೊದಲನೆಯ ಸ್ಫುರಣವೇ ಸ್ಪಂದ. ಸ್ಪಂದ, ಕಂಪನ, ಚಲನ, ಸ್ಫುರತ್ತಾ, ಉನ್ಮೇಷ ಇವೆಲ್ಲವೂ ಒಂದೇ ಅರ್ಥವನ್ನು ಸೂಚಿಸುತ್ತವೆ. ಮೂಲದಲ್ಲಿ ವಿಕಾರವಿಲ್ಲದೆ ಶಕ್ತಿಯ ವಿಲಾಸವನ್ನು ತೋರ್ಪಡಿಸುವಿಕೆಯೇ ಸ್ಪಂದ. ವಿಶ್ವದ ಭೇದಗಳು ಅನಂತವಾಗಿದ್ದು ಸ್ಪಂದ ಶಕ್ತಿಯ ಮಹಿಮೆಯಿಂದ ಪ್ರತಿಯೊಂದು ಪದಾರ್ಥವು ಭಿನ್ನಭಿನ್ನವಾಗಿ ಗುಣ, ಕ್ರಿಯೆ, ಆಕಾರ, ವ್ಯವಹಾರ ಪರಿಣಾಮ ಇವುಗಳಿಂದ ಬೇರೆ ಬೇರೆಯಾಗಿ ತೋರುತ್ತಿರುತ್ತವೆ. ಪದಾರ್ಥಗಳ ತಾರತಮ್ಯವು ಸ್ಪಂದದ ಮಿತಿಯಿಂದಲೇ ರೂಪುಗೊಂಡಿದೆ. ಸ್ಪಂದ ದೃಷ್ಟಿಯಿಂದ ಪ್ರತಿಯೊಂದು ವ್ಯಕ್ತಿಯನ್ನೂ ಸ್ಪಂದದ ಮಿತಿಯಿಂದ ಪ್ರತಿಯೊಂದು ಪದಾರ್ಥವನ್ನೂ ಅರಿಯುವುದರಿಂದ ಐಕ್ಯ ಮತ್ತು ಭಿನ್ನತೆಗಳು ಒಂದರಲ್ಲೇ ಅಡಗಿರುತ್ತವೆಂಬುದೂ, ವಿಶ್ವದ ವ್ಯವಹಾರಗಳೆಲ್ಲಾ ಸ್ಪಂದದ ತಾರತಮ್ಯಗಳಿಂದ ನಡೆಯುತ್ತಿರುತ್ತವೆಂಬುದೂ ಗೋಚರವಾಗುತ್ತದೆ. ಈ ವಿಧವಾದ ತಿಳುವಳಿಕೆಯಿಂದ ತನ್ನ ಪರಿಮಿತಿ, ತನ್ನ ಯೋಗ್ಯತೆ, ತನ್ನ ಶಕ್ತಿ, ತನ್ನ ಅರಿವು ಚೆನ್ನಾಗಿ ಗೊತ್ತಾಗುತ್ತವೆ. ಸತ್ವ ರಜಸ್ತಮಸ್ಸುಗಳ ಪ್ರಭಾವವು ಚಿತ್ ಸ್ಪಂದದಿಂದಲೇ ಹೊರಟಿರುವುದಾದರೂ ಎಷ್ಟೇ ವಿಕಾರಗಳನ್ನು ಹೊಂದಿದ್ದರೂ ವಿಶ್ವವು ಶಿವಾಭಿನ್ನವಾಗಿದೆಯೆಂದೂ ವಿಶ್ವದ ವ್ಯವಹಾರವೆಲ್ಲಾ ಸ್ಪಂದದ ಚಮತ್ಕಾರವೆಂದೂ ಪರಿಪೂರ್ಣನಾದ ಶಿವನಲ್ಲಿ ಯಾವ ವ್ಯತ್ಯಾಸವೂ ಉಂಟಾಗುವುದಿಲ್ಲವೆಂದೂ ತಿಳಿದು ಸ್ಪಂದ ತತ್ವದ ಸ್ವರೂಪವನ್ನು ಅನುಸಂಧಾನ ಮಾಡುವವನಿಗೆ ಸ್ವರೂಪ ವಿಕಾಸವೇರ್ಪಡುತ್ತದೆ. ಸುಖ, ದುಃಖ ಗ್ರಾಹ್ಯ ಗ್ರಾಹಕಭಾವ ಮೌಢ್ಯ ಇವುಗಳಿಲ್ಲದಿರುವ ಸ್ಥಿತಿಯೇ ಸ್ವಸ್ವರೂಪ-ಅದೇ ಪರಮಾರ್ಥ. ಎಲ್ಲಾ ವ್ಯತ್ಯಾಸಗಳೂ ಸ್ಪಂದ ಶಕ್ತಿಯ ವಿಲಾಸಗಳು.

ನ ದುಃಖಂ ನ ಸುಖಂಯತ್ರ
ನ ಗ್ರಾಹ್ಯೋ ಗ್ರಾಹಕೋ ನಚ
ನ ಚಾಸ್ತಿ ಮೂಢ ಭಃವೋಪಿ
ತದಸ್ತಿ ಪರಮಾರ್ಥತಃ ॥

**–ಸ್ಪಂದಕಾರಿಕಾ** (ಮುಂದುವರಿಯುವುದು)

---

ತುಮಕೂರು ತಾಲ್ಲೋಕು ಕೆಸ್ತೂರಿನ 'ಕಸ್ತೂರಿ ಅಕ್ಕನ ಬಳಗದ' ಆಶ್ರಯದಲ್ಲಿ ನಿರ್ಮಿಸಿರುವ ಶ್ರೀ ಬಸವೇಶ್ವರ ಶಿವಾನುಭವ ಮಂಟಪದಲ್ಲಿ ಕಾರ್ತೀಕ ಶುದ್ಧ ಪಂಚಮಿಯಂದು ಶ್ರೀ. ಮ. ನಿ. ಪ್ರ. ಸ್ವ. ಅಟವೀ ಸ್ವಾಮಿಗಳವರ ೮೦ ನೆಯ ಪುಣ್ಯತಿಥಿಯನ್ನು ಮೂರು ದಿನಗಳ ಕಾಲ ಜರುಗಿಸಲಾಯಿತು. ಸಮಾರಂಭದ ಅಧ್ಯಕ್ಷತೆಯನ್ನು ಶಿರ್ಶಿ ಬಣ್ಣದ ಮಠದ ಉತ್ತರಾಧಿಕಾರಿಗಳಾದಂಥ ಶ್ರೀ ಶಿವಲಿಂಗ ದೇಶಿಕರು ಅಲಂಕರಿಸಿದ್ದರು. ಸಮಾರಂಭಕ್ಕೆ ಅನೇಕ ಭಕ್ತ ಮಹಾಶಯರು ಆಗಮಿಸಿದ್ದರು.

# "ಸಂಕ್ರಾಂತಿ"

**'ಸಿದ್ಧಗಂಗಾ' ಹೊಸರೂಪ ತಳೆಯುತ್ತಿರುವ ಸುಸಂದರ್ಭಕ್ಕಾಗಿ ಬರೆದ ಕವನ**

ಅಂಬೆಗಾಲಿಕ್ಕುತಲಿ
ಮಾಸ ಮೂರಕ್ಕೊಮ್ಮೆ
ಮೈದೋರಿ ಬರುತ್ತಿದ್ದ
'ಸಿದ್ಧಗಂಗಾ' ಜ್ಞಾನದೇವಿ
ಜ್ಞಾನದಾಹಿಗಳೆಡೆಗೆ
ಅಮೃತಧಾರೆಯ ಹರಿಸಿ
ಮೂಸ ಮೂಸಕ್ಕೊಮ್ಮೆ
ಬರುವ ಕೃಪೆದೋರಿದಳು
ಆರು ವರುಷದ ಹಿಂದೆ
ಸಂಕ್ರಾಂತಿಯಂದೆ !
ಹದಿನಾರು ತುಂಬಿರಲು
ಹಳೆಯ ರೂಪವನಳಿದು
ಬಂದಳಿದೊ ಮೈದುಂಬಿ
ಹೊಸರೂಪ ತಳೆದು
ಅದು ಕೂಡ ಈ ಬಾರಿ
ಸಂಕ್ರಾಂತಿಯಂದು !!
ಹಳತನೆಲ್ಲನು ಕೊಡವಿ
ಹೊಸತನವ ಹಂಬಲಿಸಿ
ತುಂಬಿಕೊಳ್ಳಲು ಮೈಯ್ಯ
ಅಣಿಯಾಗುತಿವೆ ಜಗದ
ಜೀವಕೋಟಿ.
ಬಾನ ಬೀದಿಯೊಳಲ್ಲಿ
ರಥವೇರಿ ಬರುತಿರುವ
ರವಿರಾಯನೂ ಕೂಡ
ತನ್ನ ಪಯಣದ ಪಥವ
ಬದಲಿಸುವನು.
ಕೃಷಿಕ ಸುರಿಸಿದ ಬೆವರಿ-
ನೊಂದೊಂದು ಕಣ ಕಣವು
ಕಾಳಾಗಿ ಮೈದುಂಬಿ
ಭಣವೆಯಲಿ ಒಗ್ಗೂಡಿ
ನಲಿಯುತಿದೆ ಕಣವು
ಬಂದಿತಿದೊ ಸಂಕ್ರಾಂತಿ
ತಂದಿಹುದು ಸುಖ ಶಾಂತಿ
ಎಳ್ಳು-ಬೆಲ್ಲವ ಬೀರಿ
ನಲಿಯುವಾ ಪುಣ್ಯದಿನ
ಇದು ಉತ್ತರಾಯಣ !

—'ಕಾವ್ಯ ಸುಧಾಪ್ರಿಯ'
(ಕೆ. ಜಿ. ರಂಗಯ್ಯ)

---

**ಹಸುಳೆ ಕಂದ**

ತೊದಲ ನುಡಿವುದು ಹಸುಳೆ ಕಂದ
ಆ ನುಡಿಯ ಕೇಳುತಿರೆ ಮನಕಾನಂದ
ದಣಿದ ಹೃದಯಕೆ ಸಂತಸ ತಂದ
ಸುಂದರ ಸೊಬಗಿನ ಮುಖಾರವಿಂದ.

—ಪುಟ್ಟಸಿದ್ದಯ್ಯ.

# ಹೆಚ್ಚು ಹೆಚ್ಚು ತರಕಾರಿ ಬೆಳೆಯಿರಿ

—ಐ. ಸಿ. ಎ ಆರ್.

ತರಕಾರಿ ಮತ್ತು ಹಣ್ಣು ನಮ್ಮ ಆಹಾರದ ಅವಿಭಾಜ್ಯ ಅಂಗ. ಒಬ್ಬನಿಗೆ ದಿನ ಒಂದಕ್ಕೆ 230 ಗ್ರಾಂ ತರಕಾರಿ (ಹಣ್ಣನ್ನೊಳಗೊಂಡು) ಬೇಕಾಗುವುದೆಂದು ತಜ್ಞರ ಅಂದಾಜು. ಭಾರತದಲ್ಲಿ ಎಷ್ಟುಮಂದಿ ದಿನಕ್ಕೆ ಇಷ್ಟು ತರಕಾರಿ ತಿನ್ನು ತ್ತಿದ್ದಾರೆ! ಬಡತನದ ರೇಖೆಯ ಕೆಳಗಿನ ಜನಕ್ಕೆ ಇದರಲ್ಲಿ ಕಾಲುಪಾಲಾದರೂ ದಕ್ಕು ತ್ತಿದೆಯೆ? ಖಂಡಿತ ಇಲ್ಲ. ಕಾರಣ? ಹಲವಾರು.

ಮೊದಲನೆಯದಾಗಿ ಹಿಡಿ ಅನ್ನಕ್ಕೇ ಚೈತನ್ಯವಿಲ್ಲದ ಜನತೆ ಹಣ್ಣು-ತರಕಾರಿಯ ಕನಸೂ ಕಾಣಲು ಸಾಧ್ಯವಿಲ್ಲ. ಸಾಮಾನ್ಯವಾಗಿ ವೈದ್ಯರ ಬಳಿಗೆ ಹೋದಾಗ ಮಾತ್ರ ಈ ಜನ ಹಣ್ಣಿನ ಹೆಸರನ್ನು ಕೇಳಿ ಬಾಯಿನೀರು ಕುಡಿಯುತ್ತಾರೆ. ಇವರ ಕನಸು ನನಸಾಗಬೇಕಾದರೆ ತರಕಾರಿ-ಹಣ್ಣಿನ ಉತ್ಪಾದನೆ ಹೆಚ್ಚಾಗಬೇಕು; ಅವುಗಳ ಬೆಲೆ ಇವರಿಗೆ ಎಟುಗುವಂತಾಗಬೇಕು. ಶರೀರದ ಬೆಳವಣಿಗೆಗೆ ಇವುಗಳ ಮಹತ್ವವೇನು ಎಂಬ ಅರಿವು ಎಲ್ಲರಿಗೂ ಮೂಡಬೇಕು.

ದಿನೇದಿನೇ ತರಕಾರಿ-ಹಣ್ಣಿನ ಉತ್ಪಾದನೆಯೇನೋ ಹೆಚ್ಚುತ್ತಿದೆ. ಇವು 1951ರಲ್ಲಿ 38 ಗ್ರಾಂ, 1961ರಲ್ಲಿ 110 ಗ್ರಾಂ ಮತ್ತು 1971ರಲ್ಲಿ 160 ಗ್ರಾಂ ತಲಾ ಒಬ್ಬನಿಗೆ ಒಂದು ದಿನಕ್ಕೆ ಲಭ್ಯವಿದ್ದುವು ಎಂದು ವರದಿಗಳು ಹೇಳುತ್ತವೆ. ಇದು ಬರೀ ಸರಾಸರಿ ಲೆಕ್ಕಾಚಾರ! ಬಡತನದ ರೇಖೆಯ ಕೆಳಗಿನವರಿಗೆ ಬೇರೆಯೇ ಲೆಕ್ಕಾಚಾರ ಹಾಕಬೇಕಾಗುತ್ತದೆ.

ಉಳಿದ ಬೆಳೆಗಳಿಗೆ ಹೋಲಿಕೆಯಾಗಿ ತರಕಾರಿ ಮತ್ತು ಹಣ್ಣಿನ ಗಿಡಗಳಿಂದ ತುಂಬಾ ಕಡಿಮೆ ಇಳುವರಿ ಬರುತ್ತಿದೆ. ಇದಕ್ಕೆ ಕಾರಣ—ನಮ್ಮ ರೈತರು ಸುಧಾರಿತ ತಳಿಗಳು/ಕೃಷಿ ಪದ್ಧತಿಗಳು/ವಿಧಾನಗಳನ್ನನುಸರಿಸುತ್ತಿಲ್ಲ. ಈ ಬೆಳೆಗಳನ್ನು ಅಂತರ ಬೆಳೆಗಳನ್ನಾಗಿ ಬೆಳೆಯಬಹುದು, ಮಿಶ್ರ ಬೆಳೆಗಳನ್ನಾಗಿ ಬೆಳೆಯಬಹುದು. ನೀರಾವರಿ ಅನುಕೂಲತೆಗಳಿರುವೆಡೆ, ಮನೆ ಮತ್ತು ಹಿತ್ತಲಿನ ಖಾಲಿಬಿಟ್ಟ ಜಾಗದಲ್ಲಿ, ಕೈದೋಟಗಳಲ್ಲಿ ಇವನ್ನು ಬೆಳೆಸಬಹುದು, ಗಳಿಸಬಹುದು, ಸದಾಕಾಲ ಕಾರ್ಯನಿರತರಾಗಿರಬಹುದು. ಎಲ್ಲಕ್ಕೂ ಮಿಗಿಲಾಗಿ ನ್ಯೂನಪೋಷಣೆಯಿಂದ ಬಳಲುತ್ತಿರುವ ಜನತೆಗೆ, ವಿಶೇಷವಾಗಿ ಮಕ್ಕಳಿಗೆ ಹೆಚ್ಚುಹೆಚ್ಚು ಹಣ್ಣು-ತರಕಾರಿಯನ್ನು ಬೆಳೆಯಬಹುದು. ಆಹಾರಧಾನ್ಯ, ಬೇಳೆಕಾಳುಗಳಷ್ಟೇ ಹಣ್ಣು ಮತ್ತು ತರಕಾರಿಯೂ ಅಂಗಾಂಗಗಳ ಬೆಳವಣಿಗೆಗೆ ಅವಶ್ಯಕವೆಂಬುದನ್ನು ನಮ್ಮ ರೈತರು ಅರಿಯಬೇಕು.

# ವೀರಶೈವರು ನಾವು ಲಿಂಗವಂತರು

ನಾವು ಹಡಪಿಗರಲ್ಲ ಶೆಟ್ಟಿ ಬಣಜಿಗರಲ್ಲ
ನಾವು ಗಾಣಿಗರಲ್ಲ ಕುಡುಒಕ್ಕಲಿಗರೂ ಅಲ್ಲ
ನಾವು ಜಂಗಮರಂತೂ ಅಲ್ಲವೇ ಅಲ್ಲ
ಹಾಗಾದರೆ ಮತ್ತೆ ನಾವು ಯಾರು ?
ವೀರಶೈವರು ನಾವು ಲಿಂಗವಂತರು ॥೧॥

ನಾವು ಶೆಟ್ಟಿಗಳಲ್ಲ ಕುರುಹಿನ ಶೆಟ್ಟಿಗಳೂ ಅಲ್ಲ
ಪಟ್ಟಸಾಲಿಗರಲ್ಲ ಸಮಾಸಾಲಿಗರಲ್ಲ
ಜಾಡ ಪಂಚಮಸಾಲಿ ಅಲ್ಲವೇ ಅಲ್ಲ
ಹಾಗಾದರೆ ಮತ್ತೆ ನಾವು ಯಾರು ?
ವೀರಶೈವರು ನಾವು ಲಿಂಗವಂತರು ॥೨॥

ರಡ್ಡಿ ಸಾದರು ಅಲ್ಲ ಬಣಗಾರ ಗೌಳಿಗರಲ್ಲ
ಶಿವಸಿಂಪಿ ಕುಂಬಾರ ಹಾಲುಮತದವರಲ್ಲ
ಮಡಿವಾಳ ಮಾದಗರು ಅಲ್ಲವೇ ಅಲ್ಲ
ಹಾಗಾದರೆ ಮತ್ತೆ ನಾವು ಯಾರು ?
ವೀರಶೈವರು ನಾವು ಲಿಂಗವಂತರು ॥೩॥

ಹತ್ತು-ಒಂಬತ್ತು-ನೂರು ಮೇಲೆ ಎಂಬತ್ತೊಂದು
ಫೆಬ್ರವರಿ ಮಾಸದಲ್ಲಿ ಬಾಗಿಲಿಗೆ ಬರುತಿಹನು ಗಣತಿಗಾರ
ಧರ್ಮಯಾವದು ? ಎಂಬ ಪ್ರಶ್ನೆಗೆ ಉತ್ತರಿಸುವ
ವೀರಶೈವರು ನಾವು ಲಿಂಗವಂತರು

—ಪೂಜ್ಯ ವಿಜಯ ಮಹಂತೇಶ ಸ್ವಾಮಿಗಳು
ಇಳಕಲ್ಲು.

# ‘ವಚನೋದ್ಯಾನ’ ಕುರಿತ ಕೆಲವು ಅನಿಸಿಕೆಗಳು

—ಎಸ್. ಎಸ್. ರೇಣುಕಾರಾಧ್ಯ

ಕನ್ನಡ ಸಾಹಿತ್ಯಕ್ಕೆ ಚಿರಪರಿಚಿತರಾಗಿರುವ ಶ್ರೀ ಸಿದ್ಧಯ್ಯ ಪುರಾಣಿಕರು ಪ್ರಮುಖ ಕವಿಗಳಲ್ಲೊಬ್ಬರು. ಅವರು ‘ಜಲಪಾತ’ ‘ಕರುಣಾ ಶ್ರಾವಣ’ ಮಾನಸ ಸರೋವರ, ಮೊದಲು ಮಾನವನಾಗು, ‘ಕಲ್ಲೋಲ ಮಾಲೆ’ ಮೊದಲಾದ ಕೃತಿಗಳಲ್ಲಿ ಆಧುನಿಕ ಕನ್ನಡ ಛಂದೋವೈವಿಧ್ಯವನ್ನು ಅತ್ಯಂತ ಸಮರ್ಥವಾಗಿ ದುಡಿಸಿಕೊಂಡಿದ್ದು ಕನ್ನಡ ಕಾವ್ಯದ ವಿಶಿಷ್ಟ ಕೃಷಿಕರಲ್ಲೊಬ್ಬರಾಗಿರುತ್ತಾರೆ. ಅವರ ಈಚಿನ ಕೃತಿ ‘ವಚನೋದ್ಯಾನ’ ಕನ್ನಡ ಕಾವ್ಯ ಕೃತಿಗಳ ಸಾಲಿನಲ್ಲಿ ಮುಖ್ಯವಾದುದಾಗುತ್ತದೆ. ವಚನೋದ್ಯಾನ’ವನ್ನು ಕುರಿತು ನನ್ನ ಅನಿಸಿಕೆಗಳನ್ನು ವ್ಯಕ್ತಮಾಡಲು ಮುನ್ನ ಪ್ರಾಸ್ತಾವಿಕವಾದ ಕೆಲವು ಮಾತುಗಳನ್ನು ಹೇಳುವ ಆವಶ್ಯಕತೆಯಿದೆಯೆಂದು ತೋರುತ್ತದೆ.

ಸುಮಾರು! ಎಂಟುನೂರು ವರ್ಷಗಳ ಹಿಂದೆಯೇ ‘ವಚನ’ ಒಂದು ಸಾಹಿತ್ಯ ರೂಪ’ (ಪ್ರಕಾರ) ಬೆಳೆಯಿತು. ‘ವಚನ’ ಇಂದು ಕೂಡ ಅಲ್ಲಲ್ಲಿ ಸಾಹಿತ್ಯ ಪ್ರಕಾರವಾಗಿ ಬಳಕೆಯಾಗುತ್ತಿದೆ. ‘ವಚನೋದ್ಯಾನ’ ಕೂಡ ‘ವಚನ”ಗಳ ಒಂದು ಸಂಕಲನ. ನಮ್ಮ ಸಾಹಿತ್ಯ ಚರಿತ್ರೆಯನ್ನು ಅವಲೋಕಿಸುವಲ್ಲಿ ಕಾಲದಿಂದ ಕಾಲಕ್ಕೆ ಛಂದಸ್ಸು, ಕಾವ್ಯ ಪ್ರಕಾರಗಳಲ್ಲಿ ಸಾಕಷ್ಟು ವೈವಿಧ್ಯತೆಯನ್ನು ಗುರುತಿಸುತ್ತೇವೆ. ಚಂಪೂ, ವಚನ, ರಗಳೆ’ ಷಟ್ಪದಿ, ಸಾಂಗತ್ಯ, ತ್ರಿಪದಿ ಇತ್ಯಾದಿ. ಪ್ರತಿಯೊಂದು ಸಾಹಿತ್ಯ ‘ಪ್ರಕಾರ’ವೂ ಒಂದು ನಿರ್ದಿಷ್ಟ ಕಾಲಮಾನದಲ್ಲಿ ತನ್ನೆಲ್ಲ ಸಾಧ್ಯತೆಗಳೊಂದಿಗೆ ಕನ್ನಡ ಕಾವ್ಯವನ್ನು ಉತ್ತುಂಗಕ್ಕೇರಿಸಿದೆ. ಮತ್ತು ನಂತರದ ಕಾಲದಲ್ಲಿ ತನ್ನ ಮೊದಲಿನ ಪ್ರಜ್ವಲತೆಯನ್ನು ಕಳೆದುಕೊಂಡು ಕೇವಲ ಪ್ರಯೋಗ ಪ್ರಿಯತೆಯಿಂದಾಗಿಯೋ, ‘ಅನುಕರಣೆ”ಯಿಂದಾಗಿಯೋ ಮಂಕಾದಂತೆ ತೋರುತ್ತವೆ. ಉದಾಹರಣೆಗೆ ಚಂಪೂ, ಹತ್ತನೇ ಶತಮಾನದಲ್ಲಿ ಕಂಡಷ್ಟು ಸಮೃದ್ಧತೆಯನ್ನು, ಈವರೆಗಿನ ಕನ್ನಡ ಕಾವ್ಯದ ಚರಿತ್ರೆಯಲ್ಲಿ ಆಲ್ಲೊಮ್ಮೆ ಇಲ್ಲೊಮ್ಮೆ

ಕಾದರೂ ಹಿಂದಿನ ವೈಶಿಷ್ಟವನ್ನು ಪಡೆಯಲೇ ಇಲ್ಲ. ಇದೇ ಮಾತನ್ನು ವಚನ ವನ್ನು ಕುರಿತಂತೆಯೂ ಹೇಳಬಹುದು, ಎಂದರೆ ಒಂದು ಸಾಹಿತ್ಯ ಪ್ರಕಾರ ಉಚ್ಛ್ರಾಯ ಸ್ಥಿತಿಯನ್ನು ತಲುಪಲು ಅಥವಾ ಕವಿಗಳೇ ಅಂಥದೊಂದು ನಿರ್ದಿಷ್ಟ ಪ್ರಕಾರವನ್ನು ರೂಪಿಸಿಕೊಳ್ಳುವುದರ ಹಿಂದೆ ತದ್‌ಯುಗೀಯ ಮನೋಧರ್ಮ ಮತ್ತು ತತ್‌ಕಾಲೀನ ಅನಿವಾರ್ಯತೆಗಳು ಕೆಲಸ ಮಾಡಿರುತ್ತವೆಂದು ತೋರುತ್ತದೆ.

ಸಾಹಿತ್ಯ, ಜನಜೀವನಗಳಲ್ಲಿ ಬದಲಾದ ಸ್ಥಿತಿಯೊಂದಕ್ಕೆ ಹವಣಿಸುವ ಸಂಧಿ ಕಾಲ ಹನ್ನೆರಡನೆಯ ಶತಮಾನ, ಉದ್ಧರಿಂದ ಮತ್ತು ಸಾಮೂಹಿಕ ಜನ ಜಾಗೃತಿ ಯನ್ನುಂಟಾಗಿಸುವ ತುಡಿತ ಸಮಾಜ ಸುಧಾರಕರಿಗೆ (ಅರ್ಥಾತ್ ವಚನಕಾರರಿಗೆ) ಕಾಡಿದ್ದರ ಹಿನ್ನೆಲೆಯಲ್ಲಿ ವಚನದಂಥ ಸಾಹಿತ್ಯ ಪ್ರಕಾರದ ಅಗತ್ಯ ಅಂದಿಗೆ ಇದ್ದಂತೆ ತೋರುತ್ತದೆ. ಸಾಮೂಹಿಕ ಚಳುವಳಿಯೊಂದರ ಅಂಗವಾಗಿ ಬಂದ ವಚನ ಸಾಹಿತ್ಯ ಪ್ರಕಾರವಾಗಿ ಸಾಕಷ್ಟು ಸಮೃದ್ಧವಾಗೇ ಬೆಳೆಯಿತು. ಆದರೆ ನಂತರದ ಕಾಲದಲ್ಲಿ ಬಹುಮಟ್ಟಿಗೆ ಕೇವಲ ಅನುಕರಣೆ ಇಲ್ಲವೇ ವೈಯಕ್ತಿಕ ತೃಪ್ತಿಗಾಗಿ ಮಾಡಿದ 'ಪ್ರಯೋಗ'ವಷ್ಟೇ ಆಗಿ ಉಳಿಯಿತು. ಆ ಹಿಂದಿನ ಮಾತುಗಳ ಮೂಲಕ ಹಿಂದಿನ ಸಾಹಿತ್ಯ ಪ್ರಕಾರವೊಂದನ್ನು ಇಂದು ಬಳಸಿಕೊಳ್ಳುವುದು-ಅರ್ಥಹೀನ ಎಂದು ಹೇಳುವ ಉದ್ದೇಶ ಖಂಡಿತ ಇಲ್ಲ. ಸಾಹಿತ್ಯ ಪ್ರಕಾರ ಹಿಂದಿನದಾದರೂ ಇಂದಿಗೂ ಅದರ ಬಳಕೆಯ ಅಗತ್ಯ ಮತ್ತು ಅನಿವಾರ್ಯತೆ ಇರುವುದಾದರೆ ಇಂದಿಗೆ ಮಾತ್ರವಲ್ಲ, ಈ ಸಂತರದ ಕಾಲಕ್ಕೂ ಅದು ಉಳಿಯಲೇ ಬೇಕು. ವಚನ ರಚನೆಯನ್ನು ಮಾಡಿದವರು ಈ ಕಾಲದಲ್ಲೂ ಅನೇಕರಿದ್ದಾರೆ. ಪ್ರಮುಖ ವಾಗಿ ಎಸ್. ವಿ. ರಂಗಣ್ಣ, ಎಸ್. ವಿ. ಪರಮೇಶ್ವರ ಭಟ್ಟರು, ಜ. ಚ. ನಿ. ಮೊದಲಾದವರನ್ನು ಹೆಸರಿಸಬಹುದು. ಆದರೆ ಇಂದಿನ ರಚನೆಗಳಲ್ಲಿರುವ ಅರ್ಥ ಪೂರ್ಣತೆ, 'ಪ್ರಯೋಗ' 'ತೃಪ್ತಿ' ಎಷ್ಟು ಎಂದೆಲ್ಲ ವಿಚಾರಿಸಲು ಇಲ್ಲಿ ಸಾಧ್ಯ ವಾಗದು. ಆದರೆ ಇಂಥ ಮಾತುಗಳು ವಚನೋದ್ಯಾನ ಬಗ್ಗೆ ಮುಂದೆ ಹೇಳುವ ಮಾತುಗಳಿಗೆ ಹಿನ್ನೆಲೆಯಾಗುತ್ತವೆಂದು ಭಾವಿಸಿದ್ದೇನೆ.

'ವಚನೋದ್ಯಾನ, ಸಿದ್ದಯ್ಯ ಪುರಾಣಿಕರ ಹಲವು ಬಿಡಿ ವಚನಗಳ ಒಂದು ಸಂಕಲನ. ಹೆಸರೇ ಸೂಚಿಸುವಂತೆ ಅದೊಂದು ಬಿಡಿ ವಚನಗಳಿಂದ ತುಂಬಿದ ಉದ್ಯಾನ. ಇಂದಿನ ಎಲ್ಲ ವಚನಕಾರರಿಗಿರುವಂತೆಯೇ (ವಚನಗಳನ್ನು ಬರೆದಿರು ವುದರಿಂದ ಅವರು ವಚನಕಾರರು) ಪುರಾಣಿಕರಿಗೂ ಕೂಡ ವಚನಗಳನ್ನು ರಚಿಸುವಲ್ಲಿ ಹನ್ನೆರನೇ ಶತಮಾನದ ವಚನಕಾರರ ಪ್ರೇರಣೆ ಇದೆ. ಅಂದಿನ ವಚನಗಳು ಆಧುನಿಕ ಕನ್ನಡ ಕಾವ್ಯದ ರೂಪಾಂಶಕ್ಕೆ ಕೊಟ್ಟಿರುವ ಪ್ರೇರಣೆಯನ್ನು ಪುರಾಣಿಕರ ಈ ಮೊದಲ ಕಾವ್ಯ ರಚನೆಯ ಹಿಂದೆಯೂ ಗುರುತಿಸಬಹುದು. ಅಲ್ಲಲ್ಲ ಅವರು

ವಿಶಿಷ್ಟ ನೆಲೆಗಟ್ಟೊಂದನ್ನು ತಮ್ಮ ಕಾವ್ಯ ರಚನೆಯಲ್ಲಿ ರೂಪಿಸಿಕೊಂಡಿರುವುದು ಕಾಣುತ್ತದೆ.

ವಚನೋದ್ಯಾನದಲ್ಲಿನ ರಚನೆಗಳು ವಚನಗಳೇ ಹಲವೆಡೆ ಶಿವಶರಣರ ವಚನಗಳನ್ನೇ ಹೋಲುತ್ತವೆ. ಮತ್ತೆ ಕೆಲವು ಶಿವಶರಣರ ಕಸುವು ಮತ್ತು ಆಧುನಿಕ ಕಾವ್ಯದ ಲಯ, ಮಟ್ಟು, ಗತ್ತುಗಳು ಮೇಳೈಸಿಕೊಂಡ ವಿಶಿಷ್ಟ ರಚನೆಗಳಾಗಿವೆ. ಆದುದರಿಂದಲೇ ಅಂಥವು ಇಂದಿನ ನೆಲದಿಂದ ಮೂಡಿದುವಾಗುತ್ತವೆ. ಬಹುತೇಕವಾಗಿ ಎಲ್ಲ ವಚನಗಳೂ 'ಸ್ವತಂತ್ರ ಧೀರ ಸಿದ್ಧೇಶ್ವರ' ಎಂಬ ಅಂಕಿತದಿಂದ ಕೂಡಿವೆ. ಈ ಅಂಕಿತವನ್ನು ಸ್ವತಂತ್ರ, ಧೀರ, ಸಿದ್ಧ ಇತ್ಯಾದಿ. ಇಂದಿನ ಮೌಲ್ಯಗಳ ಹಿಂದಿರುವ ಸಂಕೇತವೆಂದು ವಿವರಿಸಿಕೊಳ್ಳಬಹುದಾದರೂ, ಇಲ್ಲಿನ ಹಲವು ರಚನೆಗಳಿಗೆ ಅಂಕಿತದ ಅನಿವಾರ್ಯತೆ ಇದ್ದಂತೆ ತೋರದು. ಇಲ್ಲಿ ಬರೆಯುತ್ತಿರುವುದು ವಚನಗಳನ್ನು ಎಂಬುದರ ಅರಿವಷ್ಟೆ ಅನಿವಾರ್ಯ ಎನ್ನಿಸಿರಬಹುದು. ಉದಾ :

ಕೊಟ್ಟ ಹಣ ಕರಗಿತು, ಕಟ್ಟಿಕೊಟ್ಟ ಮನೆ ಬಿದ್ದಿತು
ಇತ್ತ ಬಟ್ಟೆ ಹರಿಯಿತು, ಪಟ್ಟಿಯ ಮೇಲೆ ಕೊಟ್ಟ ಹೊಲ ಮಾರಿಹೋಯಿತು
ಬಿಟ್ಟ ಕಾಯಿಲೆ ಮತ್ತೆ ಬಂದಿತು, ಕೆಟ್ಟ ಚಟಗಳು ಮತ್ತೆ ಮೈದೋರಿದವು
ಸುಖೀರಾಜ್ಯ ಸ್ವಪ್ನರಾಜ್ಯವಾಗಿಯೇ ಉಳಿಯಿತು ಭಾರತದಲ್ಲಿ ।
.......... ........ ........................ ... '' (೪೫೮)

ಇಂಥವನ್ನು ಗಮನಿಸಬಹುದು. ಈ ವಚನದ ಕೊನೆಯಲ್ಲಿ ಬರುವ ಅಂಕಿತದ ಅಗತ್ಯತೆ ಅಷ್ಟಾಗಿ ತೋರದು. ಅದೇ ರೀತಿ – "ಮುಟ್ಟಿದರೆ ಮೃತ್ಯುವನೆ ಬರಿಸುವ ವಿದ್ಯುತ್ತನೇ ಝುಗರ್ಝುಗಿಸಿ........ ತ್ರಾಹಿಯೆನ್ನರಯ್ಯ ಶರಣರು' (೪೨೩) ಇತ್ಯಾದಿ ವಚನಗಳನ್ನು ಗಮನಿಸಬಹುದು. "ಯಾರು ಬಂದವರು? ಎಂದು ಕೇಳದಿರೇನಣ್ಣ ಚೀಟಿಯ ಅಚ್ಚು ಹಾಕಿಸಿಲ್ಲ ದೊಡ್ಡವರ ಶಿಫಾರಸು ಪತ್ರ ತಂದಿಲ್ಲ.... ಬರಗೊಡಬಹುದು ಒಳಗೆ'' ಎಂಬ ವಚನ ಅಂಕಿತವಿಲ್ಲದೆಯೂ ಉತ್ತಮ ರಚನೆಯಾಗಿದೆ.

ಅಂದಿನ ವಚನಕಾರರಲ್ಲಿ ಅದರಲ್ಲೂ ಬಸವಣ್ಣನವರಲ್ಲಿ ವಿಶೇಷವಾಗಿ ಎದ್ದು ಕಾಣುವ ಸ್ವವಿಮರ್ಶೆ, ಆಂತರಂಗಿಕ ಶೋಧನೆಯ ಅಂಶವನ್ನು ಪುರಾಣಿಕರಲ್ಲೂ ಗುರುತಿಸಬಹುದು. ಈ ನಿಟ್ಟಿನಲ್ಲಿ ಅವರು ಹೆಚ್ಚಾಗಿ ಬಸವಣ್ಣನವರ ಜಾಡಿನಲ್ಲೇ ನಡೆದಂತೆ ತೋರುವುದಾದರೂ ಅಲ್ಲಲ್ಲೆ ಬಳಕೆಯಾಗುವ ಶಬ್ದ ಚಿತ್ರಗಳು ಗಮನ ಸೆಳೆಯುತ್ತವೆ. "ಕಡುಹಸಿದು ಕಳ್ಳಿಯ ಕುಡಿನಂತಾಯಿತ್ತಯ್ಯ ಎನ್ನ ಯುಕ್ತಿ' "ನೀರಡಸಿ ಬಾಯಾರಿ ಸುಣ್ಣದ ನೀರನ್ನು ಕುಡಿದಂತಾಯಿತ್ತಯ್ಯ' (೧೧೫) "ಹಗಲಿರುಳು ಹಿಮದ ಹೊದಿಕೆಯಿದ್ದರೂ ನೆನೆದು ಮೃದುವಾಗದ ಹಿಮಗಿರಿ ಶಿಖ

ರದಂತಾದುದಯ್ಯ ನನ್ನ ಅಹಂಕಾರ ' [೧೧೪] ಇಂಥ ಕಡೆಗಳಲ್ಲಿರುವ ತೀವ್ರತೆ, ಹೊಸತನ ಪ್ರಶಂಸಾರ್ಹ.

ವಸ್ತುದೃಷ್ಟಿಯಿಂದ ಪುರಾಣಿಕರ ಬಹುತೇಕ ವಚನಗಳು ಹೆಚ್ಚು ಪ್ರಸ್ತುತವಾಗುತ್ತವೆ. ಬದುಕಿನ ಹಲವು ವೈಚಿತ್ರ್ಯಗಳನ್ನು, ವಿಸಂಗತಿಗಳನ್ನು ದಾಖಲಿಸುವಲ್ಲಿ ಹೆಚ್ಚು ಯಶಸ್ವಿಯನ್ನು ಗುರುತ್ತಿಸುತ್ತೇವೆ. ಹೀಗಾಗುವಲ್ಲಿ ಆಡುಮಾತಿನ ಲಯದ ವಚನಗಳ ಗದ್ಯಗೀತತ್ವ ಸಹಕಾರಿಯಾಗಿದೆ. ಬದಲಾದ ಸಾಮಾಜಿಕ ಸ್ಥಿತ್ಯಂತರದಲ್ಲಿ ಯಾಂತ್ರೀಕರಣ ನಗರೀಕರಣಗಳಿಂದಾದ ಪ್ರಗತಿಯೊಂದಿಗೆ ಮಾನವ್ಯದ ನೆಲೆಯಲ್ಲಿ ಉಂಟಾದ ಬಿರುಕುಗಳನ್ನು ಸೂಕ್ಷ್ಮವಾಗಿ ವಿಶ್ಲೇಷಿಸಿದ್ದಾರೆ. ಉದಾ: ''ಯಾಂತ್ರೀಕರಣದ ಉಬ್ಬಿನಲ್ಲಿ ಮಾನವೀಕರಣಕ್ಕೆ ಮಹತ್ವವಿಲ್ಲದಂತಾಯಿತೇನಯ್ಯ' ''ಅಣುವಿನ ವಿಭಜನೆ, ಮನದ ವಿಶ್ಲೇಷಣೆ..... ಅಬ್ಬರದಲ್ಲಿ ಸ್ನೇಹ ಸಂಯೋಜನೆಗೆ ಸಮಯವಿಲ್ಲದಂತಾಯಿತೇನಯ್ಯ ' [೩೦೨] '' ನವೀಕರಣ ನವೀಕರಣವೆಂದು ನಲುಗುತ್ತಲಿಹರಯ್ಯ ನವಯುವಕರು ' (೩೦೩] ಜೊತೆ ಜೊತೆಯಲ್ಲೆ ''ನವೀಕರಣದೊಡನೆ ಮಾನವೀಕರಣವೂ ಸಾಗಿದರೆ ಸರಿ" ಎಂಬ ಆಶಯವಿದೆ. ವೈಜ್ಞಾನಿಕ ಪ್ರಗತಿಯೊಂದಿಗೆ ಸಾಗುತ್ತಿರುವ ಬದುಕಿನಲ್ಲಿನ ವಿಘಟಿತ ಮಾನವೀಯ ಸಂಬಂಧಗಳಿಂದಾಗಿ ಮುಂದೆ ಎದುರಿಸಲಿರುವ ದುರಂತತೆಗೆ ಬೆರಳು ಮಾಡುತ್ತಾರೆ. ನಮ್ಮ ಆರ್ಥಿಕ ವಿಸಂಗತಿಗಳನ್ನು ಕುರಿತು– '' ಹೋಮರನಂಥ ಕವಿಗಳು ಭಿಕ್ಷೆ ಬೇಡಬೇಕು, ಹೆಂಡ ಮಾರುವವರು ಲಕ್ಷಾಧೀಶರಾಗಬೇಕು, ಇದೇ ನಿನ್ನ ಸಾಮಾಜಿಕ ನ್ಯಾಯವೇನಯ್ಯ " ಎನ್ನುತ್ತಾರೆ. '' ಈ ಸುಂದರ ಸುಮನೋಹರ ವನವನ್ನು ಜಾತಿ ಉಪಜಾತಿಗಳ ಕೋಣೆಗಳಿಗಾಗಿ ಹುಟ್ಟಿಸಿದೆಯೇನಯ್ಯ ' '' ಎನಿತು ಕುರೂಪಗಳು ನರರು ನಿರ್ಮಿಸಿದ ನಾಗರಿಕತೆಯಲ್ಲಿ ' ತೋಳ ನಿರ್ಧರಿಸಿದ ನೀತಿ ಕುರಿಗೆ ವರ"ವಾಗ ಬಲ್ಲುದೇನಯ್ಯ "– ಇಂಥ ಮಾತುಗಳಲ್ಲಿ ಸಮಕಾಲೀನ ಸ್ಥಿತಿಯಲ್ಲಿನ ಅಸಂಗತ್ಯಗಳ ಬಗ್ಗೆ ಇರುವ ಅಚ್ಚರಿ, ಪ್ರಶ್ನೆ ವ್ಯಕ್ತವಾಗುತ್ತವೆ. ಬದಲಾದ ಮೌಲ್ಯಗಳಿಂದ ಆದ ದುರಂತಗಳು, ಅನರ್ಹವಾದುದರ ಅಟ್ಟಹಾಸ, ಮೊದಲಾದುವನ್ನು ಪ್ರಶ್ನಾರ್ಥಕವಾಗಿ ನೋಡುವ ಪುರಾಣಿಕರು ಸ್ವತಃ ಕವಿಯಾಗಿದ್ದು ಹೇಳುವ –" ಮುನ್ನುಡಿ ಓದಿ ವಾದಿಸಿದವನೊಬ್ಬ, ಸಾದರ ಸ್ವೀಕಾರವನ್ನೋದಿ ವಾದಿಸಿದವನಿನ್ನೊಬ್ಬ ಇಬ್ಬರೂ ಮೂಲ ಗ್ರಂಥವನ್ನು ಓದದವರೇ " ಎಂಬ ಮಾತುಗಳು ಹೆಚ್ಚು ಅರ್ಥವಂತಿಕೆಯವಾಗುತ್ತವೆ.

ಪ್ರಸ್ತುತವೆನ್ನಿಸುವ ವಸ್ತುವನ್ನಾಯ್ದು ಕೊಂಡ ವಚನಗಳಲ್ಲಿನ ಭಾವ, ಬಂಧಗಳು, ಭಾಷಾ ಪ್ರಯೋಗ ಪ್ರಶಂಸಾರ್ಹ. ಉಳಿದಂತೆ-ಸ್ವವಿಮರ್ಶೆ, ಅಂತರಂಗಿಕ ಶೋಧ, ದೇವನಲ್ಲಿಡುವ ಮೊರೆಯುಳ್ಳ-ಬಹುತೇಕ ವಚನಗಳು ಸ್ವಲ್ಪ ಪೇಲವಾದಂತೆ

ತೋರುತ್ತವೆ. ಅಂಥ ಕೆಲವೆಡೆ ಹೊಸತನವನ್ನುಳ್ಳ ಶಬ್ದ ಚಿತ್ರಗಳೂ ಇಲ್ಲವಾಗಿದ್ದರೆ ಅವು ಕೇವಲ ಅನುಕರಣೆಯಾಗುವುದಕ್ಕಿಂತ ಹೆಚ್ಚೇನು ಆಗುತ್ತಿರಲಿಲ್ಲವೇನೊ! ಈ ಹಿಂದಿನ ರಚನೆಗಳಲ್ಲಿ ಪುರಾಣಿಕರು ತಮ್ಮ ಓದುಗರಿಗೆ ಹುಟ್ಟಿಸುತ್ತ ಬಂದ ಆಸೆ ಇಲ್ಲಿ ಸ್ವಲ್ಪ ಇಲ್ಲವಾದಂತೆ ತೋರುವುದಾದರೂ ಇಲ್ಲಿನ ರಚನೆಗಳಲ್ಲಿರುವ-ಆಧುನಿಕ ಕಾವ್ಯ ಸತ್ವ, ವಚನಕಾರರ ರಚನೆಗಳ ಸತ್ಯಗಳೆರಡೂ ಕೂಡಿ ಆದ 'ಕಸಿ' ಉತ್ತಮವಾಗಿದೆ. ಎಂದೇ ಪುರಾಣಿಕರ ಈ ಕೃತಿ ಶ್ರೇಷ್ಠ ಕೃತಿಯೊಂದಲ್ಲವಾದರೂ ಉತ್ತಮ ಕೃತಿಗಳಲ್ಲಿ ಒಂದು ಎನ್ನುವುದು ನಿಸ್ಸಂದೇಹ.

---

## ಅವಸ್ಥೆ ಭೇದ

—ಸ. ಮುನಿಸ್ವಾಮಿ

ಮರವ ಮರೆಸಿತು ಮಾಮದದಾನೆ
ಮರದೊಳು ಮರೆಯಿತು ಮಾಮದದಾನೆ
ಪರವ ಮರೆಸಿತು ಜಗದಾದಿ ಭೂತಂಗಳ್ !
ಪರದೊಳು ಮರೆಯಿತು ಜಗದಾದಿ ಭೂತಂಗಳಯ್ಯಾ !

ಹೊನ್ನ ಮರೆಸಿತು ಹೊಂದೊಡಹ ಭೂಷಣ
ಹೊನ್ನೊಳು ಮರೆಯಿತು ಹೊಂದೊಡಹ ಭೂಷಣ
ತನ್ನ ಮರೆಸಿತು ತನ್ನೈದು ಕರಂಗಳು
ತನ್ನೊಳು ಮರೆಯಿತು ತನ್ನೈದು ಕರಣಂಗಳಯ್ಯಾ

---



---

# ವಿಧಾನ ಸೌಧದ ಶಿಲ್ಪಿ

# ಕೆಂಗಲ್ ಹನುಮಂತಯ್ಯ

—ಜಿ. ಎಲ್. ರಾವ್

ಕಂಗೊಳಿಸುವುದು ಈ ನಿನ್ನ ಶಿಲ್ಪ
ಕನ್ನಡದ ಸಿರಿಮುಕುಟವನೆ
ಛಲ ಸಾಹಸದ ಉಜ್ವಲ ಬೆಳಕೆ
ಮೌನದಲಿ ಸರಿದೆಯಾ ಕೀರ್ತಿ ಕಾಯನಾಗಿ !

ಸಾಹಸದ ಸಾರ್ಥಕ ಜೀವನವನ್ನು ನಡೆಸಿ ಕರ್ನಾಟಕದ ಮುಂದಾಳಾಗಿ ಬಾಳಿ ತನ್ನ ಜೀವನದ ಕೀರ್ತಿಸಾಧನವೋ ಎಂಬಂತೆ ವಿಧಾನಸೌಧದ ಶಿಲ್ಪಿಗಳಾದ ಕೆಂಗಲ್ ಹನುಮಂತಯ್ಯನವರು ಇಂದು ನಮ್ಮೊಂದಿಗೆ ಇಲ್ಲ.

'ಜಾತಸ್ಯ ಮರಣಂ ಧ್ರುವಂ' ಸತ್ತರೂ ಶಾಶ್ವತವಾದ ಕೀರ್ತಿಯನ್ನು ಗಳಿಸಿ ಬದುಕಿದಷ್ಟು ದಿನ ಸಾಹಸದ ಬಾಳುವೆಯನ್ನು ನಡೆಸಿದ ಕರ್ನಾಟಕದ ಮುಖ್ಯ ಮಂತ್ರಿಗಳಾಗಿ, ಭಾರತದ ರೈಲ್ವೆ ಮಂತ್ರಿಗಳಾಗಿ, ತ್ಯಾಗಕ್ಕೆ ಅಳುಕದ ದಿಟ್ಟತನದಿಂದ ದೇಶಕ್ಕಾಗಿ ದುಡಿದು ಕಲೆ, ಸಾಹಿತ್ಯ ಸಂಸ್ಕೃತಿಯ ಪ್ರಚಾರಕ್ಕಾಗಿ ತನ್ನ ಆಡಳಿತ ದಲ್ಲಿ ಅವಕಾಶ ಕಲ್ಪಿಸಿ ಕೀರ್ತಿಕಾಯರಾಗಿ ಉಳಿದಿರುವ ಕೆಂಗಲ್ ಜೀವನ ಉಳಿದವ ರಿಗೆ ಒಂದು ಆದರ್ಶವೆಂದೇ ಹೇಳಬೇಕು.

"ಕೆ. ಹನುಮಂತಯ್ಯನವರ ಮರಣದಿಂದ ರಾಷ್ಟ್ರ ಹಾಗೂ ಕಾಂಗ್ರೆ ಪಕ್ಷದ ದುರ್ಬಲವರ್ಗದ ಜನತೆಯ ಏಳಿಗೆಗಾಗಿ ಹೋರಾಡಿದ ಒಬ್ಬಹಿರಿಯ ವ್ಯಕ್ತಿಯನ್ನು ಕಳೆದುಕೊಂಡಂತಾಗಿದೆ" ಎಂದು ಭಾರತದ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿ ಯವರು ವಿಷಾದ ವ್ಯಕ್ತಪಡಿಸಿದ್ದಾರೆ. ಕಲಿಯಾಗಿ ರಾಜಕಾರಿಣಿಯಾಗಿ, ಕನ್ನಡಿ ಗರ ಭವಿಷ್ಯದ ಬೆಳಕಾಗಿ ಸಾಧಿಸಿರುವ ಮಹತ್ವಪೂರ್ಣವಾದ ಘಟನೆಗಳೇ ಸಾಕ್ಷಿ. ಇವರ ಜೀವನವು ರೋಮಾಂಚನ ಸಂಗತಿಗಳ ಕುಸುಮ ಮಾಲೆ ಎಂದರೂ ಹೆಚ್ಚಾಗಲಾರದು. ಎಂತಹ ಪ್ರಸಂಗದಲ್ಲೂ ಎದ್ದು ಕಾಣುವ ಧೀಮಂತ ವ್ಯಕ್ತಿತ್ವ. ಮಹಾರಾಜರೊಂದಿಗೆ ಬೆರೆಯುವ ಸಂದರ್ಭದಲ್ಲಿಯಾಗಲೀ, ಮೈಸೂರಿನ ಮಂತ್ರಿಗ ಳಾಗಿ ಕಾರ್ಯ ನಿರ್ವಹಣೆ ಮಾಡುವ ವೇಳೆಯಲ್ಲಿ ಆಗಲಿ, ಭಾರತದ ಪ್ರಮುಖ ನಾಯಕ

ರಾದ, ಜವಹರಲಾಲನೆಹರು, ರಷ್ಯಾದ ಮಹಾ ನಾಯಕರಾದ ಕ್ರುಶ್ಚೇವ್ ಬುಲ್ಗಾನಿನ್, ಇರಾಣದ ಶಹಾ ಅವರೊಡನೆ, ಅಮೆರಿಕದ ನಿಕ್ಸನ್ ಜೊತೆಯಾಗಲೀ, ಮಾರ್ಷಲ್ ಟಿಟೋ, ಅಂತೆಯೇ ಅನೇಕ ಮಹಾನಾಯಕರ ಜೊತೆಗೆ ಕಲೆತು ನಿಯೋಜನೆ ವಿಚಾರಗಳಿಂದ ಮಹತ್ವ ಪೂರ್ಣವಾದ ಸಂಗತಿಗಳನ್ನು ಚರ್ಚಿಸಿ, ವಿವೇಚಿಸಿದ್ದಾರೆ. ಜವಹರಲಾಲ್ ನೆಹರು ಅವರೂ ಸಹ ಮೆಚ್ಚಿರುವ ದಕ್ಷಿಣದ ಪ್ರಮುಖ ನಾಯಕ ಇವರು. ಯಾವ ಸಮಯದಲ್ಲಿ ಆಗಲೀ ಬಾಲ ಬಡುಕುತನವಿಲ್ಲದೆ ತನಗೆ ನೇರವೆಂದು ಕಂಡದ್ದನ್ನು ಮಾಡಿ ಅದರಿಂದ ಹಲವಾರು ಮಂದಿಯ ಪರೋಕ್ಷವಾದ ನಿಂದೆಗೂ ಪಾತ್ರರಾಗಿದ್ದಾರೆ. ಆದರೂ ಅವರು ಸಾಧನೆಯ ಶಿಲ್ಪಿ, ಅವರ ಹಾಗೂ ವಿಧಾನಸೌಧದ ಸಂಬಂಧ 'ಹೂವು ಸೌರಭವ' ಸಂಬಂಧವಾಗಿದೆ. ಕರ್ಣಾಟಕ ಎಂದಿಗೂ ಇವರನ್ನು ಮರೆಯುವಂತಿಲ್ಲ. ಬದುಕಿರುವಾಗಲೇ ಇವರು ತನ್ನ ಜನತೆಗೆ ಎಂದಿಗೂ ಮರೆಯಲಾರದ ಸ್ಮಾರಕವನ್ನು ನಿರ್ಮಿಸಿದ್ದಾರೆ, ಎಂದರೂ ತಪ್ಪಾಗಲಾರದು. ಇಂದು ರಾಜ್ಯ ಸಕಲ ಕಾರ್ಯ ಕಲಾಪಗಳಿಗೂ ಈ ಸೌಧ ಕೇಂದ್ರವಾಗಿದ್ದು ಈ ಮಹಾ ಶಿಲ್ಪಿಯನ್ನು ಸದಾ ನೆನೆಯಲೇಬೇಕಾಗಿದೆ.

'ಚಲೇ ಜಾವ್' ಚಳುವಳಿಯಲ್ಲಿ ಇವರು ಕನ್ನಡಿಗರ ಮಧ್ಯೆ ಕೆಚ್ಚಿನಿಂದ ಹೋರಾಡಿದ ವ್ಯಕ್ತಿ, ಕಿರಿಯರಿಗೆ ಇವರ ಪ್ರಿಯ ನಾಯಕತ್ವ. ಹೋರಾಟದ ಅಂತ್ಯದಲ್ಲಿ ಜೈಲುವಾಸ, ಅದರಂತೆಯೇ ಇವರು ಏಳು ಸಾರಿ ಜೈಲುವಾಸ ಅನುಭವಿಸಿದ್ದಾರೆ. ಜೈಲಿನಲ್ಲಿ ಇರಲಿ ರಾಜ್ಯ ವಿಚಾರಗಳ ಬಗ್ಗೆ ಪರಿಶೀಲನೆ ನಡೆಸಲಿ, ಮುಖ್ಯಮಂತ್ರಿಗಳಾಗಿ ತಮ್ಮ ಕರ್ತವ್ಯ ನಡೆಸಲಿ, ತನ್ನ ಗೆಳೆಯರಿಗೆ ಪರಿಚಿತರಿಗೆ ಅಪರಿಚಿತರಿಗೆ ಒಂದೇ ರೀತಿಯಾದ ಆದರ ಅಭಿಮಾನಗಳನ್ನು ತೋರಿದ್ದಾರೆ. ತಮ್ಮ ಪಾಲಿಗೆ ಬಂದ ಕರ್ತವ್ಯವನ್ನು ಮನಸ್ಸಾಕ್ಷಿಗೆ ಒಪ್ಪುವಂತೆ ನಿರ್ವಹಿಸಿದ್ದಾರೆ. ಆದರೆ ರಾಜಕೀಯವು ಪೂರ್ಣವ್ಯಕ್ತಿ ಚಾರಿತ್ರ್ಯಗಳಿಗೆ ಸೇರಿದಂತೆ ಒಬ್ಬನಿಗೆ ಬೆಂಬಲವಾಗಿರುತ್ತದೆ ಎಂದು ಹೇಳಲು ಬರುವುದಿಲ್ಲ. ಸಮಯ ಸನ್ನಿವೇಶಗಳಿಗೆ ಸೇರಿದಂತೆ ಇಂದು ಒಬ್ಬನನ್ನು ಮೇಲೆ ಎತ್ತಬಹುದು ಅಥವಾ ಕೆಳಗೆ ಇಳಿಸಬಹುದು. ಸಮಯದಲ್ಲಿ ತೋರಿದ ದಕ್ಷತೆ, ದಿಟ್ಟತನ, ಪ್ರಾಮಾಣಿಕತೆ ಮಾನವೀಯತೆಯ ಗುಣ ಶಾಶ್ವತವಾಗಿ ಉಳಿಯುತ್ತದೆ. ಪದವಿ ಬರಬಹುದು ಹೋಗಬಹುದು ಕೀರ್ತಿಗೆ ಸಾವಿಲ್ಲ, ಅದು ಶಾಶ್ವತ.

ಕೆಂಗಲ್ಲರ ಬಾಳುವೆಯ ವಿವಿಧ ಹಂತಗಳೂ ರೋಮಾಂಚಕಾರಿಯಾಗಿ ಸಾಗಿದೆ. ಲಕ್ಕಪ್ಪನ ಹಳ್ಳಿಯಿಂದ ದಿಲ್ಲಿಯವರೆಗೆ ವಿವಿಧ ಹಂತಗಳಲ್ಲೂ ಅವರು ಧೀಮಂತ ರೀತಿಯಲ್ಲಿ ಮುಂದುವರಿದು ವೃದ್ಧಾಪ್ಯಕಾಲದಲ್ಲಿ ಮರಳಿ ಮನೆಗೆ ಹಿಂತಿರುಗಿದರು. ಕೆಂಗಲ್ಲರು ಹನುಮಂತನ ಸೇವೆಯಲ್ಲಿ ಕಾಲ ಕಳೆದಿದ್ದಾರೆ. ಅವರು ಆಂಜನೇಯನ

ಪರಮಭಕ್ತರು. ಹನುಮಂತ ನಗರದಲ್ಲಿ ರಾಮ ಆಂಜನೇಯರ ಆದರದ ಮೈತ್ರಿಯ ಆಲಿಂಗನದ ಶಿಲ್ಪ ಕೆಂಗಲ್ಲರ ಪ್ರಯತ್ನದ ಪರಿಣಾಮವೆಂದೇ ಹೇಳಬೇಕು. ಪಾದ ಯಾತ್ರೆಯಲ್ಲಿ ಜನರ ಮಧ್ಯೆ ನಡೆದು ಅವರನ್ನು ಹುರಿದುಂಬಿಸಿ ಈ ಮಹಾ ಪ್ರತಿ ಮೆಯ ನಿರ್ಮಾಣಕ್ಕೆ ಕಾರಣರಾಗಿದ್ದಾರೆ. ಬೆಂಗಳೂರು ಜಿಲ್ಲೆಯ ರಾಮನಗರ ತಾಲ್ಲೂಕು ಲಕ್ಕಪ್ಪನ ಹಳ್ಳಿಯ ಬಡ ಕುಟುಂಬದಲ್ಲಿ 1908 ರಲ್ಲಿ ಶ್ರೀ ಕೆಂಗಲ್ ಹನುಮಂತಯ್ಯನವರ ಜನನ. ಮೈಸೂರು ಮಹಾರಾಜ ಕಾಲೇಜಿನಲ್ಲಿ ಬಿ. ಎ. ಪದವಿ ಪಡೆದು 1932 ರಲ್ಲಿ ಪುಣೆಯ ಲಾ ಕಾಲೇಜಿನ ಮೂಲಕ ಎಲ್.ಎಲ್.ಬಿ. ಪದವಿ ಪಡೆದರು. ತಮ್ಮ ಜೀವನವನ್ನು ವಕೀಲವೃತ್ತಿಯ ಮೂಲಕ ಪ್ರಾರಂಭಿಸಿ ದರು. ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದು 1927 ರಲ್ಲಿ ಮದ್ರಾಸಿ ನಲ್ಲಿ ನಡೆದ ಕಾಂಗ್ರೆಸ್ ಅಧಿವೇಶನಕ್ಕೆ ಇಲ್ಲಿಂದ ಪ್ರತಿನಿಧಿಯಾಗಿ ಭಾಗವಹಿಸಿದ್ದರು.

ಮೈಸೂರು ಕಾಂಗ್ರೆಸ್ ಜನ್ಮತಾಳಿದಾಗ ಅದರ ಸ್ಥಾಪಕ ಸದಸ್ಯರಾಗಿ, ನಾಯಕರಾಗಿ 1937 ರ ವರೆಗೂ ಪ್ರದೇಶ ಕಾಂಗ್ರೆಸಿನ ಪ್ರಮುಖ ನಾಯಕ ರಾಗಿದ್ದರು.

ಬೆಂಗಳೂರು ಪುರಸಭೆಯ ಸದಸ್ಯರಾಗಿ ಅಧ್ಯಕ್ಷರಾಗಿ, ಪ್ರಜಾ ಪ್ರತಿನಿಧಿ ಸಭೆಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಆಗಲೂ ಕಾಂಗ್ರೆಸ್ ಪಕ್ಷದ ನಾಯಕ ರಾಗಿದ್ದರು ಆಂಗ್ಲರ ರಾಜ್ಯಭಾರವನ್ನು ವಿರೋಧಿಸಿ ಭಾಷಣ ಮಾಡಿ, ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಕ್ರಿಯವಾಗಿ ಭಾಗವಹಿಸಿ ಅನೇಕ ಬಾರಿ ಜೈಲುವಾಸ ಮಾಡಿ ದ್ದಾರೆ. ಮೈಸೂರು ಚಲೋ ಸತ್ಯಾಗ್ರಹದಲ್ಲಿಯೂ ಭಾಗವಹಿಸಿದ್ದಾರೆ.

ಭಾರತ ಸ್ವಾತಂತ್ರ್ಯವಾದಾಗ ಮೈಸೂರಿನಿಂದ ಭಾರತ ಸಂವಿಧಾನ ರೂಪಿಸು ವುದರಲ್ಲಿ ಕೆಂಗಲ್ಲರ ಪಾತ್ರವೂ ಮಹತ್ವ ಪೂರ್ಣವಾದುದು. ಸ್ಟಾಕ್‌ಹೊಂ ಡಬ್ಲಿನ್ ರಷ್ಯಾ ವಿದೇಶ ಪ್ರವಾಸದ ಅನುಭವ, 1952 ರಲ್ಲಿ ಮೈಸೂರು ವಿಧಾನ ಸಭೆಗೆ ಆಯ್ಕೆಯಾಗಿ ಅದೇ ವರ್ಷ ಮಾರ್ಚಿ ತಿಂಗಳಿನಲ್ಲಿ ಮುಖ್ಯಮಂತ್ರಿಗಳಾದರು ನಾಲ್ಕು ವರ್ಷಗಳ ಕಾಲ ವಿಚಾರ ಪೂರ್ಣವಾದ, ರೀತಿಯಲ್ಲಿ ಆಡಳಿತ ನಡೆಸಿದರು.

ಅವರ ಆಡಳಿತದ ಕಾಲದಲ್ಲಿ ವಿಧಾನ ಸೌಧದ ನಿರ್ಮಾಣವಾಗಿ ಅವರನ್ನು ವಿಧಾನಸೌಧದ ಶಿಲ್ಪಿ ಎಂದು ಜನರು ಗೌರವಿಸಿದರು. ರಾಮಾಯಣ ಭಾರತನ್ನು ಮುದ್ರಿಸಿ ಅಗ್ಗದ ಬೆಲೆಗೆ ಒದಗುವಂತೆ ಮಾಡಿದರು. ಕಲೆ ಸಂಸ್ಕೃತಿಯ ಅಭಿವೃದ್ಧಿಗೆ ಪ್ರೋತ್ಸಾಹ ನೀಡಿದರು. ವಿದ್ಯಾದಾನ ಭೂದಾನದ ಬಗ್ಗೆ ಹೆಚ್ಚಿನ ಒಲವನ್ನು ತೋರಿ ಕರ್ನಾಟಕದ ಏಕೀಕರಣಕ್ಕೆ ಇವರು ಇಟ್ಟ ಹೆಜ್ಜೆ ದಿಟ್ಟತನದಿಂದಕೂಡಿದ್ದು.

ವಿಧಾನ ಸಭೆಯ ಸದಸ್ಯತನದಲ್ಲಿ ಇರಲಿ ಅಥವಾ ಬೇರೆ ಯಾವ ಉನ್ನತ ಹುದ್ದೆಯಲ್ಲಿ ಇರಲಿ ಇವರು ತಮ್ಮ ಧ್ಯೇಯ ಸಾಧನೆಯನ್ನು ನಿಷ್ಠೆಯಿಂದಲೇ ನಡೆಸಿ

ಕೊಂಡುಬಂದರು. 1967–68 ರ ಕಾಲವಲ್ಲಿ ಕಾಂಗ್ರೆಸ್ ಪಕ್ಷದ ಉಪನಾಯಕರಾಗಿದ್ದರು. 1970 ರಲ್ಲಿ ಕ್ರೇಂದ್ರ ಸರಕಾರದ ಕಲ್ಯಾಣ ಹಾಗೂ ಕಾನೂನು ಮಂತ್ರಿಗಳಾದರು. 1971 ರಲ್ಲಿ ರೈಲ್ವೆ ಸಚಿವರಾದರು. 1972 ರಲ್ಲಿ ಮತ್ತೆ ಲೋಕ ಸಭೆಗೆ ಆಯ್ಕೆ. ವಿವೇಕಾನಂದ ಸ್ಮಾರಕ ಶಿಲಾ ಸಮಿತಿಯ ಅಧ್ಯಕ್ಷರಾಗಿದ್ದರು. 1977 ರಲ್ಲಿ ನಡೆದ ಚುನಾವಣೆಯಲ್ಲಿ ಬೆಂಗಳೂರಿನ ಕ್ಷೇತ್ರದಲ್ಲಿ ಕೆ. ಎಸ್. ಹೆಗ್ಗಡೆಯವರಿಂದ ಪರಾಜಯ. ಸ್ವರಾಜ್ಯ ಪಕ್ಷದ ಸ್ಥಾಪನೆ-ಹಾಗೂ ವಿಸರ್ಜನೆ. ಮತ್ತೆ ಕಾಂಗ್ರೆಸ್ ಒಡೆದಾಗ ಶ್ರೀಮತಿ ಇಂದಿರಾ ಗಾಂಧಿಯವರ ಪರವಾಗಿಯೇ ಇದ್ದರು.

ವಿಧಾನ ಸೌಧದಂತೆ ಭವ್ಯವೆನಿಸುವ ಹುತಾತ್ಮರ ಸ್ಮಾರಕವಾಗಿ ನಿಲ್ಲುವ 'ವೀರ ಸೌಧ' ಒಂದು ನಿರ್ಮಾಣದ ಕನಸು ಅವರದು. ಅವಕಾಶ ಒದಗದೆ ಮನಸ್ಸಿನಲ್ಲಿ ಮೆಲುಕು ಹಾಕುತ್ತಲೇ ಇದ್ದರು. ಕೊನೆಯ ದಿನಗಳಲ್ಲಿ ಅವರು ಏಕಾಂಗಿಯಾಗಿ ಗತಕಾಲದ ಸ್ಮರಣೆಯಲ್ಲಿ ಕಾಲವನ್ನು ಕಳೆದರು.

ಹಳಿದವರೇ ಇರಲಿ ಹೊಗಳಿದವರೇ ಇರಲಿ, ಇವರಿಗೆ ಎಲ್ಲರೂ ಸಮಾನರು. ಯಾರನ್ನು ಹಿಡಿಯಲಿಲ್ಲ ಕೈ ಬಿಡಲೂ ಇಲ್ಲ. ಕನ್ನಡ ನಾಡು, ಸಂಸ್ಕೃತಿ ಸಾಹಿತ್ಯಕ್ಕೆ ಉನ್ನತ ಸೇವೆ ಸಲ್ಲಿಸಿದರು. ಉತ್ಕಟವಾದ ಅಭಿಮಾನ ತೋರಿದರು. ಪ್ರಾಚೀನ ಪರಂಪರೆಯನ್ನು ಮುನ್ನಡೆಸಲು ಯತ್ನಿಸಿದರು. ಗುಣದೋಷಗಳು ಏನಿದ್ದರೂ ಅವರು ಮಾನವರಾಗಿದ್ದರು ಎಂಬುದನ್ನು ನಾವು ಸ್ಮರಿಸೋಣವೇ ? ಮಾನವೀಯ ಮುಂದಾಳಾಗಿ ನಮ್ಮೆಲ್ಲರ ಪೂರ್ಣ ಗೌರವವನ್ನು ಸಲ್ಲಿಸೋಣ.

—(ವಿದ್ಯಾಕೃಪೆ)

---

ಅಖಿಲ ಭಾರತ ವೀರಶೈವ ಮಹಾಸಭೆ ಬೆಂಗಳೂರು

**ವೀರಶೈವ ಸಮಾಜ ಬಾಂಧವರಲ್ಲಿ ವಿಜ್ಞಾಪನೆ.**

1981 ಫೆಬ್ರವರಿಯಲ್ಲಿ ನಡೆಯುವ ಜನಗಣತಿ ದಾಖಲೆ ಮಾಡಿಕೊಳ್ಳುವ ಪ್ರತಿನಿಧಿ ಮನೆಗೆ ಬಂದು ನಿಮ್ಮ ಧರ್ಮ ಅಥವಾ ಮತ ಯಾವುದು ಎಂದು ಕೇಳಿದಾಗ ವೀರಶೈವ ಅಥವಾ ಲಿಂಗಾಯತ ಎಂತಲೇ ಹೇಳಿ ಬರೆಯಿಸಿ, ಮರೆಯದಿರಿ.

ಒಳ ಪಂಗಡ ಹೇಳಬೇಡಿ. ವೀರಶೈವ ಸಮಾಜದ ಭವಿಷ್ಯದ ದೃಷ್ಟಿಯಿಂದ ದಯವಿಟ್ಟು ಸಹಕರಿಸಿ.

ಅ. ಭಾ. ವೀ. ಸ

ಕಾರ್ಯದರ್ಶಿ

‘ಸಿದ್ಧಗಂಗಾ’ ಚಿರಾಯುವಾಗಲೆಂದು ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗಕ್ಕೆ ಕೃತಜ್ಞತೆಗಳು.

816 ಶ್ರೀ ಲಕ್ಷ್ಮಣ
S/o ಶ್ರೀ ವರ್ತೂರು ವೀರಪ್ಪ
ಬಿದಲೂರು, ದೇವನಹಳ್ಳಿ ತಾ॥
ಬೆಂಗಳೂರು ಜಿಲ್ಲೆ.

817 ಶ್ರೀ ಎನ್. ಆರ್. ಪ್ರಕಾಶ್
S/o ಶ್ರೀ ಗೋವಿಂದಶೆಟ್ಟಿ
ಆವತಿ, ದೇವನಹಳ್ಳಿ ತಾ॥
ಬೆಂಗಳೂರು ಜಿಲ್ಲೆ.

818 ಶ್ರೀ ಪ್ರಕಾಶ್
S/o ಶ್ರೀ ವೀರಭದ್ರಪ್ಪ
ಮರ್ಚೆಂಟ್, ಜಂಗಮಕೋಟೆ
ಕೊಲಾರ ಜಿಲ್ಲೆ.

819 ಶ್ರೀ ಆರ್. ಕೆಂಪೇಗೌಡ
S/o ಶ್ರೀ ಸಿ. ರಾಮಕೃಷ್ಣಯ್ಯ
ರೆಡ್ಡಿ ಹಳ್ಳಿ
ಬೆಂಗಳೂರು ಜಿಲ್ಲೆ.

820 ಶ್ರೀ ಆರ್. ಕೆ. ಪಂಡರಿನಾಥ್
S/o ಶ್ರೀ ಕೃಷ್ಣಪ್ಪ
ರೆಡ್ಡಿ ಹಳ್ಳಿ
ಬೆಂಗಳೂರು ಜಿಲ್ಲೆ.

821 ಶ್ರೀ ಧರಣಿ
S/o ಶ್ರೀ ವಿ. ಕೃಷ್ಣಪ್ಪ
ದೇವನ ಹಳ್ಳಿ
ಬೆಂಗಳೂರು ಜಿಲ್ಲೆ.

822 ಶ್ರೀ ನಾಗರಾಜಮೂರ್ತಿ
S/o ಶ್ರೀ ಕಣಿವೆ ಲಿಂಗಪ್ಪ
ದೇವನ ಹಳ್ಳಿ
ಬೆಂಗಳೂರು ಜಿಲ್ಲೆ.

823 ಶ್ರೀ ಕರಿಬಸಪ್ಪ
S/o ಶ್ರೀ ಕಣಿವೆ ಬಸಪ್ಪ
ದೇವನ ಹಳ್ಳಿ
ಬೆಂಗಳೂರು ಜಿಲ್ಲೆ.

824 ಶ್ರೀ ಬಸವರಾಜು
S/o ಶ್ರೀ ಕಣಿವೆನಂಜುಂಡಪ್ಪ
ದೇವನಹಳ್ಳಿ
ಬೆಂಗಳೂರು ಜಿಲ್ಲೆ.

825 ಶ್ರೀ ಆರ್. ಶಿವರುದ್ರಪ್ಪ,
ಜೂ॥ ಇಂಜಿನಿಯರ್
S/o ಶ್ರೀ ಬಿ. ರುದ್ರಪ್ಪ
ಪಿ.ಹೆಚ್.ಇ. ಸಬ್‌ಡಿವಿಜನ್
ಚಿಕ್ಕಬಳ್ಳಾಪುರ
ಕೋಲಾರ ಜಿಲ್ಲೆ.

(ಮುಂದುವರಿಯುತ್ತದೆ.)

LICENCED TO POST WITHOUT PRE PAYMENT LICENCE NO. 3
Registered with the Registrar of News papers for India under
No. 17139/69
Siddaganga Monthly Magazine Siddaganga.
Reg No. KRN Q-9















ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.